# ಮಹಿಳಾ ಶಿಕ್ಷಕರ ಅಸ್ಮಿತೆ ಮತ್ತು ವೃತ್ತಿಪರ ಬೆಳವಣಿಗೆಯಲ್ಲಿ ಮಹಿಳಾ ಶಿಕ್ಷಕರ ವೇದಿಕೆಯ ಪಾತ್ರ

*– ಗುರು ಮೊಗೇರ್*

## ಲೇಖನದ ಸಾರಾಂಶ

*ಸೇವಾನಿರತ ಶಿಕ್ಷಕರ ಒಟ್ಟು ಪ್ರಮಾಣದಲ್ಲಿ ಶೇ.40ರಿಂದ 50ರಷ್ಟು ಮಹಿಳಾ ಶಿಕ್ಷಕರಿದ್ದರೂ ಸ್ವಯಂ ಪ್ರೇರಿತ ವೃತ್ತಿಪರ ಬೆಳವಣಿಗೆಯ ಚಟುವಟಿಕೆಗಳಲ್ಲಿ ಇವರ ಭಾಗವಹಿಸುವಿಕೆಗೆ ಕೌಟುಂಬಿಕ ಮತ್ತು ಇತರ ಸಾಮಾಜಿಕ ಕಾರಣಗಳು ತಡೆಯೊಡ್ಡುತ್ತವೆ. ಇಂದಿಗೂ ರಾಜ್ಯದ ಕೆಲವೆಡೆ ಹೆಣ್ಣುಮಕ್ಕಳ ಬಾಲ್ಯವಿವಾಹ ಮತ್ತು ಪ್ರೌಢಶಾಲಾ ಹಂತದಲ್ಲಿ ಶಾಲೆಯಿಂದ ಹೆಣ್ಣುಮಕ್ಕಳು ಹೊರಗುಳಿಯಬೇಕಾದ ಸಂಪ್ರದಾಯಬದ್ಧ ಆಚರಣೆಗಳು ರೂಢಿಯಲ್ಲಿವೆ. ಇಂತಹ ಸಾಮಾಜಿಕ ಪರಿಸರದಲ್ಲೂ ಮಹಿಳೆಯರ ವೃತ್ತಿಪರ ಬೆಳವಣಿಗೆಗೆಂದೇ ವಿಶೇಷವಾಗಿ ರೂಪಿಸಲಾದ ಮಹಿಳಾ ಶಿಕ್ಷಕರ ವೇದಿಕೆಗಳು ಮಹಿಳಾ ಶಿಕ್ಷಕರ ವೃತ್ತಿಪರ ಬೆಳವಣಿಗೆಗೆ ಒತ್ತಾಸೆಯನ್ನು ನೀಡುತ್ತಿರುವುದಲ್ಲದೆ ಅವರ ಅಸ್ಮಿತೆಯನ್ನು ಗುರುತಿಸಿಕೊಳ್ಳಲು ನೆರವಾಗುತ್ತಿವೆ. ಯಾದಗಿರಿಯ ಸುರಪುರ ತಾಲ್ಲೂಕಿನ ಮಹಿಳಾ ಶಿಕ್ಷಕರ ವೇದಿಕೆಗಳ ಪ್ರಕ್ರಿಯೆಗಳು, ಚಟುವಟಿಕೆಗಳು ಹಾಗೂ ಚರ್ಚೆಯ ವಿಷಯಗಳು ಮಹಿಳಾ ಶಿಕ್ಷಕರ ಭಾಗವಹಿಸುವಿಕೆಗೆ ಪೂರಕವಾಗಿದ್ದು ಮಹಿಳಾ ಸಬಲೀಕರಣಕ್ಕೆ ನಾಂದಿಯಾಗಿದೆ ಎನ್ನುವುದನ್ನು ಇಲ್ಲಿ ಗುರುತಿಸಲಾಗಿದೆ.*

## ಪೀಠಿಕೆ

ಯಾದಗಿರಿ ಜಿಲ್ಲೆಯ ಕೆಲವು ಆಯ್ದ ಶಿಕ್ಷಕರ ಕಲಿಕಾ ಕೇಂದ್ರಗಳಲ್ಲಿ, 14–15 ಮಹಿಳಾ ಶಿಕ್ಷಕರನ್ನು ಒಳಗೊಂಡ ಕೆಲವು ಗುಂಪುಗಳು, ಪ್ರತಿ ಶನಿವಾರ ಮಧ್ಯಾಹ್ನ, ತಮ್ಮ ಶಾಲಾ ಅವಧಿಯ ನಂತರ ಕಲೆ, ಕಸೂತಿ, ಮಹಿಳಾ ಸಬಲೀಕರಣ, ಬಾಲಕಾರ್ಮಿಕ ಪದ್ಧತಿಯ ನಿರ್ಮೂಲನೆ, ಲಿಂಗ ತಾರತಮ್ಯ ಹೋಗಲಾಡಿಸುವುದು ಮುಂತಾದ ತಮ್ಮ ಆಸಕ್ತಿಗೆ ಅನುಗುಣವಾದ, ಶಿಕ್ಷಣಕ್ಕೆ ಸಂಬಂಧಿಸಿದ ನೇರ ಮತ್ತು ಪರೋಕ್ಷ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಗುಂಪಿನ ಒಬ್ಬ ಶಿಕ್ಷಕರು ಅಥವಾ ಶಿಕ್ಷಕ ಕಲಿಕಾ ಕೇಂದ್ರದ (Teacher Learning Center - TLC) ಸಂಯೋಜಕರು ಈ ಮಹಿಳಾ ಶಿಕ್ಷಕರ ಪ್ರತಿಯೊಂದು ಗುಂಪನ್ನೂ ನಡೆಸಿಕೊಂಡು ಹೋಗುತ್ತಾರೆ. ಚಟುವಟಿಕೆಯು ಸುಮಾರು 2 ರಿಂದ 3 ತಾಸುಗಳವರೆಗೆ ನಡೆಯುತ್ತದೆ. ಈ ಗುಂಪುಗಳು

ಪ್ರತಿ ತಿಂಗಳೂ ಅಥವಾ ಅಗತ್ಯವಿದ್ದರೆ ಹೆಚ್ಚು ಸಂದರ್ಭಗಳಲ್ಲಿ ಸಭೆ ಸೇರಿ ಚರ್ಚಿಸುತ್ತವೆ. ಪ್ರತಿಯೊಂದು ಸಭೆಯಲ್ಲೂ ಕೆಲವು ಮೂಲ ಸದಸ್ಯರು ನಿರಂತರವಾಗಿ ಭಾಗವಹಿಸುತ್ತಿದ್ದು, ಹೆಚ್ಚುವರಿ ಶಿಕ್ಷಕರು ತಮ್ಮ ಅನುಕೂಲ ಹಾಗೂ ಸಮಯಾವಕಾಶದಂತೆ ಭಾಗವಹಿಸಿ ಸದುಪಯೋಗಪಡಿಸಿಕೊಳ್ಳುತ್ತಿದ್ದಾರೆ. ಎಲ್ಲ ಶಿಕ್ಷಕರೂ ಅಭಿಪ್ರಾಯ ಪಡುವಂತೆ ಇದು ಒಂದು ಸ್ವತಂತ್ರವಾದ ವೇದಿಕೆಯಾಗಿದ್ದು, ಧೈರ್ಯವಾಗಿ ಮಾತನಾಡಲು ಮತ್ತು ವಿವಿಧ ವಿಷಯಗಳ ಬಗ್ಗೆ ಅನುಭವಗಳನ್ನು ಪಡೆಯಲು ಇರುವ ಒಂದು ಸದವಕಾಶವಾಗಿದೆ. ಇಲ್ಲಿ ಶಿಕ್ಷಕರನ್ನು ಗುರುತಿಸಲಾಗುತ್ತದೆ ಮತ್ತು ಅವರ ಅಭಿಪ್ರಾಯಗಳಿಗೆ ಗೌರವ ನೀಡಲಾಗುತ್ತದೆ. ಅಲ್ಲದೆ ಇಲ್ಲಿ ಅವರ ಜ್ಞಾನ ಮತ್ತು ಪ್ರತಿಭೆಯನ್ನು ಹೊರಹೊಮ್ಮಿಸಲು ಅವಕಾಶ ನೀಡಲಾಗುತ್ತದೆ. ಮಹಿಳಾ ಶಿಕ್ಷಕರು ಶಿಕ್ಷಕ ಕಲಿಕಾ ಕೇಂದ್ರದ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಉತ್ತೇಜಿಸಲು, ಪ್ರೋತ್ಸಾಹಿಸಲು ಆ ಮೂಲಕ ಅವರ ವೃತ್ತಿಪರ ಅಭಿವೃದ್ಧಿಯನ್ನು ಸಾಧಿಸಲು ಅನುಕೂಲವಾಗುವಂತೆ ಅಜೀಂ ಪ್ರೇಮ್‌ಜಿ ಫೌಂಡೇಷನ್ ವಿಶೇಷವಾಗಿ ರಚಿಸಿರುವ ಒಂದು ಅವಕಾಶವೇ 'ಮಹಿಳಾ ಶಿಕ್ಷಕರ ವೇದಿಕೆ'.

ಚರ್ಚೆ ಮತ್ತು ಇತರ ಚಟುವಟಿಕೆಗಳ ಜೊತೆಗೆ ಈ ವೇದಿಕೆಯು ಮಹಿಳಾ ಶಿಕ್ಷಕರಿಗಾಗಿಯೇ ವಿಚಾರ ಸಂಕಿರಣಗಳು, ಕಾರ್ಯಾಗಾರಗಳು ಮತ್ತು ವಿಶೇಷ ಚಟುವಟಿಕೆಗಳನ್ನು ಆಯೋಜಿಸುತ್ತದೆ. ಈ ಚಟುವಟಿಕೆಗಳಲ್ಲಿ ವಿವಿಧ ವಿಷಯಗಳಲ್ಲಿ ಪರಿಣತಿ ಹೊಂದಿರುವ ಸಂಪನ್ಮೂಲ ವ್ಯಕ್ತಿಗಳನ್ನು ಆಹ್ವಾನಿಸಿ ಮಹಿಳಾ ಶಿಕ್ಷಕರೊಂದಿಗೆ ಸಂವಾದ ನಡೆಸಲು, ಆ ಮೂಲಕ ಜ್ಞಾನವನ್ನು ಪಡೆಯಲು ಅನುಕೂಲ ಮಾಡಿಕೊಡಲಾಗುತ್ತದೆ. ಯಾದಗಿರಿ ಜಿಲ್ಲೆಯಲ್ಲಿ 2014 ರಿಂದ ಸುಮಾರು 7 ಮಹಿಳಾ ಶಿಕ್ಷಕರ ವೇದಿಕೆಗಳು, 7 ಶಿಕ್ಷಕ ಕಲಿಕಾ ಕೇಂದ್ರಗಳಲ್ಲಿ ಚಾಲ್ತಿಯಲ್ಲಿದ್ದು, 250ಕ್ಕೂ ಹೆಚ್ಚು ಶಿಕ್ಷಕರು ಸ್ವಪ್ರೇರಣೆಯಿಂದ ವಿವಿಧ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದಾರೆ.

ಯಾದಗಿರಿ ಜಿಲ್ಲೆಯಲ್ಲಿ ಫೌಂಡೇಷನ್‌ನ ಶಿಕ್ಷಕ ಕಲಿಕಾ ಕೇಂದ್ರದ ಚಟುವಟಿಕೆಗಳಲ್ಲಿ ಮಹಿಳಾ ಶಿಕ್ಷಕರು ನಿರಂತರ ಭಾಗವಹಿಸುವಂತೆ ಮಾಡುವ ಪ್ರಯತ್ನಗಳ ಹಿನ್ನೆಲೆಯಲ್ಲಿ ಈ ಮಹಿಳಾ ಶಿಕ್ಷಕರ ವೇದಿಕೆಯ ಯೋಜನೆಯು ಅಸ್ತಿತ್ವಕ್ಕೆ ಬಂದಿದೆ. ಶಾಲಾ ಶಿಕ್ಷಣಕ್ಕೆ ಸಂಬಂಧಿಸಿದಂತೆ ಡೈಸ್ ಅಂಕಿ-ಅಂಶಗಳ ಪ್ರಕಾರ ಯಾದಗಿರಿ ಜಿಲ್ಲೆಯ 350 ಶಾಲೆಗಳಲ್ಲಿ ಸುಮಾರು 38% (U-DISE 2016-17) ಮಹಿಳಾ ಶಿಕ್ಷಕರು ಕೆಲಸ ನಿರ್ವಹಿಸುತ್ತಿದ್ದಾರೆ. ಆದಾಗ್ಯೂ, ಫೌಂಡೇಷನ್‌ನ ಶಿಕ್ಷಕ ಕಲಿಕಾ ಕೇಂದ್ರದ ಔಪಚಾರಿಕ* ಹಾಗೂ ಅನೌಪಚಾರಿಕ ಚಟುವಟಿಕೆಗಳಲ್ಲಿ ಮಹಿಳಾ ಶಿಕ್ಷಕರ ಭಾಗವಹಿಸುವಿಕೆ ಬಹಳ ಕಡಿಮೆ ಇರುವುದು ಕಂಡು ಬಂದಿತ್ತು. 2013ರಲ್ಲಿ ನಡೆಸಲಾದ ಫೌಂಡೇಷನ್‌ನ ಒಂದು

---

* ಔಪಚಾರಿಕ ಚಟುವಟಿಕೆಗಳು; ಇಲಾಖೆಯ ಅನುಮತಿಯ ಆಧಾರದ ಮೇಲೆ ನಡೆಸುವ ಚಟುವಟಿಕೆಗಳು, ಇದಕ್ಕೆ ಜಿಲ್ಲೆಯ ಮತ್ತು ತಾಲೂಕಿನ ಉನ್ನತ ಅಧಿಕಾರಿಗಳ ಅನುಮತಿ ಪತ್ರದ ಅವಶ್ಯಕತೆ ಇರುತ್ತದೆ.
ಅನೌಪಚಾರಿಕ ಚಟುವಟಿಕೆಗಳು; ಶಿಕ್ಷಕರು ಸ್ವ ಆಸಕ್ತಿಯಿಂದ, ಸ್ವಯಂಪ್ರೇರಣೆಯಿಂದ ಶಿಕ್ಷಕ ಕಲಿಕಾ ಕೇಂದ್ರದ ಚಟುವಟಿಕೆಗಳಲ್ಲಿ ಭಾಗವಹಿಸುವುದು.

ಆಂತರಿಕ ಅಧ್ಯಯನವು, ಶಿಕ್ಷಕ ಕಲಿಕಾ ಕೇಂದ್ರದ ಚಟುವಟಿಕೆಗಳಲ್ಲಿ ಸರಾಸರಿ ಕೇವಲ 4 ಮಹಿಳಾ ಶಿಕ್ಷಕರು ಮಾತ್ರ ಭಾಗವಹಿಸುತ್ತಿರುವ ಅಂಶವನ್ನು ಬಹಿರಂಗಪಡಿಸಿತ್ತು. ಆದರೆ ಇದೇ ಸಮಯದಲ್ಲಿ ಪುರುಷ ಶಿಕ್ಷಕರ ಸರಾಸರಿ ಭಾಗವಹಿಸುವಿಕೆಯು ಶೇ.43ರಷ್ಟು ಇರುವುದೂ ಕಂಡುಬಂದಿತ್ತು. ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಮಹಿಳಾ ಶಿಕ್ಷಕರ ಸಂಖ್ಯೆಯನ್ನು (38%) ಪರಿಗಣಿಸಿದರೆ, ವೃತ್ತಿಪರ ಅಭಿವೃದ್ಧಿಗಾಗಿ ಅವರನ್ನು ಸಂಪೂರ್ಣವಾಗಿ ಭಾಗವಹಿಸುವಂತೆ ಮಾಡುವುದು ಫೌಂಡೇಷನ್‌ಗೆ ಅನಿವಾರ್ಯವಾಗಿತ್ತು. ಈ ಹಿನ್ನೆಲೆಯಲ್ಲಿ ನಿರಂತರವಾಗಿ ಮಹಿಳಾ ಶಿಕ್ಷಕರನ್ನು ಶಿಕ್ಷಕ ಕಲಿಕಾ ಕೇಂದ್ರದ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಮಾಡಲು ಮತ್ತು ಆ ಮೂಲಕ ಅವರ ವೃತ್ತಿಪರ ಅಭಿವೃದ್ಧಿಯನ್ನು ಸಾಧಿಸಲು ಮಹತ್ವಪೂರ್ಣವಾದ 'ಮಹಿಳಾ ಶಿಕ್ಷಕರ ವೇದಿಕೆ'ಯನ್ನು ಯಾದಗಿರಿ ಜಿಲ್ಲೆಯಲ್ಲಿ ಪರಿಚಯಿಸಲಾಯಿತು.

## ಉದ್ದೇಶಗಳು

- ಯಾದಗಿರಿ ಜಿಲ್ಲೆಯಲ್ಲಿ ಮಹಿಳಾ ಶಿಕ್ಷಕರ ವೇದಿಕೆಯನ್ನು ಹೇಗೆ ಪ್ರಾರಂಭಿಸಲಾಯಿತು?
- ಮಹಿಳಾ ಶಿಕ್ಷಕರು ಈ ವೇದಿಕೆಯನ್ನು ಕುರಿತು ಹೊಂದಿರುವ ಅಭಿಪ್ರಾಯಗಳೇನು?
- ಪುರುಷಪ್ರಧಾನ ಸಮಾಜದಲ್ಲಿ ಮತ್ತು ವೃತ್ತಿ ಪರಿಸರದಲ್ಲಿ ಮಹಿಳಾ ಶಿಕ್ಷಕರ ವೈಯಕ್ತಿಕ ಮತ್ತು ವೃತ್ತಿಪರ ಸವಾಲುಗಳನ್ನು ಬಗೆಹರಿಸಲು ಈ ವೇದಿಕೆ ಹೇಗೆ ಸಹಾಯಕವಾಗಿದೆ?

ಈ ಆಯಾಮಗಳನ್ನು ಅರ್ಥೈಸಿಕೊಳ್ಳುವುದು ಈ ಅಧ್ಯಯನದ ಮೂಲ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ

ಈ ಅಧ್ಯಯನಕ್ಕಾಗಿ ಮಹಿಳಾ ಶಿಕ್ಷಕರ ವೇದಿಕೆಯಲ್ಲಿ ಭಾಗವಹಿಸುವ 18 ಶಿಕ್ಷಕರನ್ನು (ಆಯ್ದ ಆರು ಶಿಕ್ಷಕ ಕಲಿಕಾ ಕೇಂದ್ರಗಳಿಂದ ತಲಾ 3 ಶಿಕ್ಷಕರು) ಸಂದರ್ಶಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಇದರ ಜೊತೆಯಲ್ಲಿ 6 ಶಿಕ್ಷಕ ಕಲಿಕಾ ಕೇಂದ್ರಗಳ ಸಂಯೋಜಕರಿಂದ ಸಂದರ್ಶನದ ಮೂಲಕ ಮಾಹಿತಿಯನ್ನು ಸಂಗ್ರಹಿಸಿ, ವಿಶ್ಲೇಷಿಸಿ ವರದಿಯನ್ನು ತಯಾರಿಸಲಾಗಿದೆ. ಈ ಅಧ್ಯಯನದ ವ್ಯಾಪ್ತಿ ಯಾದಗಿರಿ ಜಿಲ್ಲೆಯ 6 ಶಿಕ್ಷಕ ಕಲಿಕಾ ಕೇಂದ್ರಗಳು ಮತ್ತು ಅಲ್ಲಿ ನಡೆಯುವ ಮಹಿಳಾ ಶಿಕ್ಷಕರ ವೇದಿಕೆಯ ಚಟುವಟಿಕೆಗಳಿಗೆ ಮಾತ್ರ ಸೀಮಿತವಾಗಿದೆ.

## ಮಹಿಳಾ ಶಿಕ್ಷಕರ ವೇದಿಕೆಯ ಪ್ರಾರಂಭಿಕ ಹಿನ್ನೆಲೆ

ಈಶಾನ್ಯ ಕರ್ನಾಟಕ ಭಾಗದಲ್ಲಿರುವ ಯಾದಗಿರಿ ಜಿಲ್ಲೆಯನ್ನು ಕರ್ನಾಟಕದ ಅತ್ಯಂತ ಹಿಂದುಳಿದ ಜಿಲ್ಲೆಗಳಲ್ಲಿ ಒಂದು (ಡಾ॥ ಡಿ. ಎಂ. ನಂಜುಂಡಪ್ಪ ವರದಿ

2002) ಎಂದು ಪರಿಗಣಿಸಲಾಗಿದೆ. 2014ರ ಯೋಜನಾ ಆಯೋಗದ ಅಧ್ಯಯನದ ಪ್ರಕಾರ, ಭಾರತದ ಅತ್ಯಂತ ಹಿಂದುಳಿದ ಜಿಲ್ಲೆಗಳಲ್ಲಿ ಯಾದಗಿರಿಯು 49ನೇ ಸ್ಥಾನವನ್ನು ಪಡೆದಿದೆ. 2011ರ ಜನಗಣತಿಯ ಪ್ರಕಾರ ಈ ಜಿಲ್ಲೆಯ ಒಟ್ಟು ಜನಸಂಖ್ಯೆ 11.7 ಲಕ್ಷ. ಈ ಜಿಲ್ಲೆಯ ಲಿಂಗಾನುಪಾತ 1000 ಪುರುಷರಿಗೆ 989 ಮಹಿಳೆಯರು. ಒಟ್ಟು ಸಾಕ್ಷರತಾ ಪ್ರಮಾಣ ಶೇಕಡಾ 51.8 (ಪುರುಷರು 62.2%, ಮಹಿಳೆಯರು 42.3%). ಪುರುಷ ಮತ್ತು ಮಹಿಳೆಯರ ಸಾಕ್ಷರತೆಯ ಅಂತರ 19.9% ಇದ್ದು ಇದು ರಾಜ್ಯದ (14.7%) ಸರಾಸರಿ ಅಂತರಕ್ಕಿಂತ ಹೆಚ್ಚಿದೆ. ಜೀವನಾವಶ್ಯಕ ಅವಕಾಶಗಳ ಕೊರತೆಯಿಂದಾಗಿ ಇಲ್ಲಿಯ ಬಹುತೇಕ ಜನರು ಮುಂಬೈ, ಪುಣೆ, ಗೋವಾ ಮತ್ತು ಬೆಂಗಳೂರುಗಳಿಗೆ ಕೆಲಸ ಅರಸಿ ವಲಸೆ ಹೋಗುತ್ತಾರೆ.

ಇಂತಹ ಪ್ರತಿಕೂಲ ಪ್ರದೇಶದಲ್ಲಿ ವಾಸಿಸುವ ಜನರ ಸ್ಥಿತಿಗತಿಯು ಕೂಡ ಅತ್ಯಂತ ಶೋಚನೀಯವಾಗಿದೆ. ಅದರಲ್ಲೂ ಮುಖ್ಯವಾಗಿ ಮಹಿಳೆಯರ ಸ್ಥಿತಿಗತಿ ಬಹಳ ದುಃಖಕರವಾಗಿದೆ. ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಚಟುವಟಿಕೆಗಳಲ್ಲಿ ಮಹಿಳೆಯರ ಭಾಗವಹಿಸುವಿಕೆಯ ಶಕ್ತಿಯನ್ನು ಕಡಿತಗೊಳಿಸಿವೆ. ಈ ಜಿಲ್ಲೆಯಲ್ಲಿ ದೇವದಾಸಿ ಪದ್ಧತಿ ಇನ್ನೂ ಚಾಲ್ತಿಯಲ್ಲಿದೆ. ಬಾಲ್ಯವಿವಾಹವು ನಿರಂತರವಾಗಿ ನಡೆಯುತ್ತಿದೆ. ಪಂಚಾಯತ್ ರಾಜ್ ಕಾಯಿದೆಯ ಅಡಿಯಲ್ಲಿ, ಮಹಿಳೆಯರು ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುವುದು ಸಾಂವಿಧಾನಿಕವಾಗಿದ್ದರೂ, ಅದು ಕೇವಲ ಹೆಸರಿಗಷ್ಟೇ ಇದ್ದು ಇಲ್ಲಿಯೂ ಕೂಡ ಪುರುಷರ ಪ್ರಾಧಾನ್ಯತೆ ಎದ್ದು ಕಾಣುತ್ತದೆ. ಮಹಿಳೆಯರ ಕಡಿಮೆ ಶೈಕ್ಷಣಿಕ ಗುಣಮಟ್ಟ ಹಾಗೂ ಸ್ಥಾನಮಾನದ ಕೊರತೆ ಅವರ ಹಿಂದುಳಿಯುವಿಕೆಗೆ ಕಾರಣವಾಗಿದ್ದು, ಅವರನ್ನು ಕೃಷಿ ಮತ್ತು ಮನೆಗೆಲಸಕ್ಕೆ ಮಾತ್ರ ಸೀಮಿತಗೊಳಿಸಿವೆ. ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ಇಲ್ಲದಿರುವುದು ಮತ್ತು ಸಮಾಜದ ಕೆಟ್ಟ ಪದ್ಧತಿಯಾದ ಬಾಲ್ಯ ವಿವಾಹ ಇನ್ನೂ ಚಾಲ್ತಿಯಲ್ಲಿರುವುದು ಮಹಿಳೆಯರ ಈ ಸ್ಥಿತಿಗೆ ಕಾರಣ ಎಂಬುದು ಹಲವಾರು ಮಹಿಳೆಯರ ದಿಟ್ಟ ಅಭಿಪ್ರಾಯ. ಇಲ್ಲಿ ಹೆಣ್ಣು ಮಕ್ಕಳ ಮದುವೆಯ ಸರಾಸರಿ ವಯಸ್ಸು 17.5 ವರ್ಷಗಳು.

ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸುವುದು ಕಡಿಮೆ, ಕಳುಹಿಸಿದರೂ ಅವರು ಪ್ರಾಥಮಿಕ ಹಂತದ ಶಿಕ್ಷಣ ಪೂರ್ಣಗೊಳಿಸಿದ ನಂತರ ಶಾಲೆಯಿಂದ ಹೊರಗುಳಿಯುವುದೇ ಹೆಚ್ಚು. ಇಂದಿಗೂ ಹಲವಾರು ಶಾಲೆಗಳಲ್ಲಿ ಮದುವೆಯಾದ ಚಿಕ್ಕ ಚಿಕ್ಕ ಹೆಣ್ಣು ಮಕ್ಕಳು ಕಾಣಸಿಗುತ್ತಾರೆ. ಶಿಕ್ಷಕರು ಅಭಿಪ್ರಾಯ ಪಡುವಂತೆ ಪ್ರತಿ ವರ್ಷ, ಪ್ರತಿ ಶಾಲೆಯಿಂದ ಸರಾಸರಿ 2–3 ಮಕ್ಕಳು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಪೂರ್ಣಗೊಳಿಸಿದ ನಂತರ ಬಾಲ್ಯವಿವಾಹಕ್ಕಾಗಿ ತಮ್ಮ ಕುಟುಂಬದವರಿಂದ ಒತ್ತಾಯಕ್ಕೊಳಗಾಗುತ್ತಿದ್ದಾರೆ. ಆದರೆ ಶಿಕ್ಷಕರಿಗೆ ಇದನ್ನು ತಡೆಯುವ ಶಕ್ತಿ ಇಲ್ಲ. ಯಾವುದೇ ಸಾಮಾಜಿಕ ಮಾಧ್ಯಮ, ಜಾಥಾಗಳು, ಜಾಗೃತಿ ಕಾರ್ಯಕ್ರಮಗಳು ಕೂಡ ಇದನ್ನು ಪೂರ್ಣವಾಗಿ ನಿಲ್ಲಿಸುವಲ್ಲಿ ಯಶಸ್ವಿಯಾಗಿಲ್ಲ. ಕರ್ನಾಟಕ ರಾಜ್ಯದ ಮಕ್ಕಳ ಹಕ್ಕುಗಳ ಆಯೋಗವು ವರದಿ ಮಾಡಿರುವಂತೆ, ಭಾರತದಲ್ಲಿ ನಡೆಯುತ್ತಿರುವ

ಬಾಲ್ಯವಿವಾಹಗಳಲ್ಲಿ 23%* ಕರ್ನಾಟಕದಲ್ಲಿಯೇ ನಡೆಯುತ್ತಿರುವುದು, ಅದರಲ್ಲೂ ಮುಖ್ಯವಾಗಿ ಯಾದಗಿರಿ ಜಿಲ್ಲೆಯು ಮುಂಚೂಣಿಯಲ್ಲಿರುವುದು ಆಘಾತಕಾರಿ ಸಂಗತಿಯಾಗಿದೆ.

ಇಂತಹ ಪ್ರದೇಶದಲ್ಲಿ ವಾಸಿಸುವ, ಕೆಲಸ ನಿರ್ವಹಿಸುವ ಮಹಿಳಾ ಶಿಕ್ಷಕರ ಸ್ಥಿತಿಗತಿಯೂ ಕೂಡ ಇದಕ್ಕಿಂತ ಭಿನ್ನವಾಗಿಲ್ಲ. ತನ್ನ 14ನೇ ವಯಸ್ಸಿನಲ್ಲಿ ಮದುವೆಯಾದ ಒಬ್ಬ ಶಿಕ್ಷಕಿ ಹೀಗೆ ಹೇಳುತ್ತಾರೆ, "ನನ್ನ ತಂದೆ ಸರಕಾರಿ ಶಾಲೆಯಲ್ಲಿ ಶಿಕ್ಷಕರಾಗಿದ್ದರು, ನಮ್ಮ ಮನೆಯಲ್ಲಿ ಬಹುತೇಕರು ಶಿಕ್ಷಿತರು ಮತ್ತು ಸರಕಾರಿ ಸೇವೆಯಲ್ಲಿದ್ದವರು. ಆದರೂ ಕುಟುಂಬದ ಒತ್ತಾಯದಿಂದ ನಾನು 14ನೇ ವಯಸ್ಸಿನಲ್ಲಿ ನನ್ನ ದೂರದ ಸಂಬಂಧಿಯನ್ನು ಮದುವೆಯಾಗಬೇಕಾಯಿತು. ನನಗೆ ವೈಯಕ್ತಿಕವಾಗಿ ಬಾಲ್ಯವಿವಾಹದ ನೋವು, ಪರಿಣಾಮಗಳ ಅರಿವಿದೆ. ಆದುದರಿಂದ ನಾನು ಶಾಲೆಯ ಹೆಣ್ಣು ಮಕ್ಕಳಲ್ಲಿ ಇದರ ಬಗ್ಗೆ ಜಾಗೃತಿಯನ್ನು ಮೂಡಿಸಲು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತೇನೆ, ಕಿಶೋರಿ ಮೇಳಗಳನ್ನು ನಡೆಸುತ್ತೇನೆ. ಆದರೂ ಸಹ ಈ ಕ್ರೂರ ಪದ್ಧತಿಯನ್ನು ಸಂಪೂರ್ಣವಾಗಿ ತಡೆಯಲು ಸಾಧ್ಯವಾಗುತ್ತಿಲ್ಲ."

ಹಲವು ಶಿಕ್ಷಕರು ವ್ಯಕ್ತಪಡಿಸಿದಂತೆ, ಮಹಿಳೆಯರು ಎಷ್ಟೇ ಆರ್ಥಿಕವಾಗಿ ಸಬಲರಾದರೂ, ತಾವು ಗಳಿಸಿದ ಹಣವನ್ನು ಖರ್ಚುಮಾಡುವ ಸಂಪೂರ್ಣ ಅಧಿಕಾರವನ್ನು ಹೊಂದಿಲ್ಲ. ಏನೇ ಖರೀದಿಸಬೇಕಾದರೂ ಕುಟುಂಬದ ಹಿರಿಯರನ್ನು ಅಥವಾ ತಮ್ಮ ಗಂಡಂದಿರನ್ನು ಕೇಳಿಯೇ ಖರ್ಚುಮಾಡಬೇಕಾದ ಅನಿವಾರ್ಯತೆ ಇದೆ. ತಾವು ಎಷ್ಟೇ ಉನ್ನತ ಹುದ್ದೆಗೆ ಹೋದರೂ, ಆರ್ಥಿಕವಾಗಿ ಸಬಲರಾದರೂ ಈ ಪುರುಷಪ್ರಧಾನ ಸಮಾಜದಲ್ಲಿ ಅವರನ್ನು ಸಮಾನರಾಗಿ ಕಾಣಲಾಗುತ್ತಿಲ್ಲ. ಇದು ಮಹಿಳಾ ಸಮಾಜದಲ್ಲಿ, ಮುಖ್ಯವಾಗಿ ಶಿಕ್ಷಕರಲ್ಲಿ ಒಂದು ಪ್ರಮಾಣದ ಅಸಮಾಧಾನವನ್ನು ಸೃಷ್ಟಿಸಿದೆ ಮತ್ತು ತಾವು ಬದುಕುತ್ತಿರುವ ಸಮಾಜದ ಬಗ್ಗೆ ಅವರಲ್ಲಿ ಒಂದು ರೀತಿ ಭಯವನ್ನು ಉಂಟುಮಾಡಿದೆ. ಇದರ ವ್ಯತಿರಿಕ್ತ ಪರಿಣಾಮ ಅವರ ವೈಯಕ್ತಿಕ ಮತ್ತು ವೃತ್ತಿ ಬದುಕಿನ ಮೇಲೆ ಆಗಿದೆ. ಒಬ್ಬ ಶಿಕ್ಷಕರು ಹೇಳುವಂತೆ, "ನಾನು ಹೊರ ಪ್ರಪಂಚವನ್ನು ನೋಡುವ, ಅರಿಯುವ ಅವಕಾಶವನ್ನು ಕಳೆದುಕೊಂಡಿರುವುದರಿಂದ ನನ್ನ ಜ್ಞಾನ ಸೀಮಿತಗೊಂಡಿದೆ. ತರಗತಿಯಲ್ಲಿ ನನ್ನ ಜ್ಞಾನವನ್ನು ಮಕ್ಕಳಿಗೆ ವರ್ಗಾಯಿಸಲು ಸಾಧ್ಯವಾಗುತ್ತಿಲ್ಲ. ಎಲ್ಲಿಯಾದರೂ ನನ್ನ ಧ್ವನಿಯನ್ನು ಹೆಚ್ಚಿಸಿದರೆ, ತರಬೇತಿ ಮತ್ತು ಕಾರ್ಯಾಗಾರಗಳಲ್ಲಿ ನನ್ನ ಅನುಭವಗಳನ್ನು ಹಂಚಿಕೊಂಡರೆ ಅದಕ್ಕೆ ಮನ್ನಣೆ ಸಿಗುವುದಿಲ್ಲ. ಬದಲಾಗಿ ನನ್ನ ಅಭಿಪ್ರಾಯಗಳನ್ನು ಎಲ್ಲ ಸಹಪಾಠಿಗಳ ಮುಂದೆ ಟೀಕೆ ಮಾಡಲಾಗುತ್ತದೆ. ಆದುದರಿಂದ ನಾನು ಏನನ್ನೂ ಹೇಳಲು ಭಯಪಡುತ್ತೇನೆ."

ಇಂತಹ ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರು ಸಾರ್ವಜನಿಕ ಕಾರ್ಯಕ್ರಮಗಳಲ್ಲಿ, ಸಾಮಾಜಿಕ-ಆರ್ಥಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ,

---

* ಇಂಡಿಯನ್ ಎಕ್ಸ್‌ಪ್ರೆಸ್ ವರದಿ, ಸೆಪ್ಟೆಂಬರ್ 26, 2017.

ಪ್ರಮುಖವಾಗಿ ಸಂಜೆ ಅಥವಾ ರಾತ್ರಿ ಸಮಯಗಳಲ್ಲಿ ಭಾಗವಹಿಸಲು ಪ್ರೋತ್ಸಾಹವಿಲ್ಲ. ಮಹಿಳಾ ಶಿಕ್ಷಕರೂ ಕೂಡ ಜಿಲ್ಲೆಯಲ್ಲಿರುವ ಈ ಅಲಿಖಿತ ಸಾಮಾಜಿಕ–ಸಾಂಸ್ಕೃತಿಕ ಕಟ್ಟುಪಾಡುಗಳಿಂದ ಹೊರತಾಗಿಲ್ಲ. ಆದ್ದರಿಂದ ಮಹಿಳೆಯರಿಗೆ, ಮುಖ್ಯವಾಗಿ ತರಗತಿಯಲ್ಲಿ ಮಕ್ಕಳ ಭವಿಷ್ಯವನ್ನು ರೂಪಿಸುವ ಮಹಿಳಾ ಶಿಕ್ಷಕರಿಗೆ ಈ ಎಲ್ಲ ಸಾಮಾಜಿಕ ಕಟ್ಟಳೆಗಳಿಂದ ಹೊರಬರುವಂತೆ ಮಾಡಲು, ಅವರನ್ನು ವೈಯಕ್ತಿಕವಾಗಿ ಮತ್ತು ವೃತ್ತಿಪರವಾಗಿ ಅಭಿವೃದ್ಧಿಪಡಿಸಲು ಮಹಿಳಾ ಶಿಕ್ಷಕರ ವೇದಿಕೆಯಂತಹ ಯೋಜನೆಯನ್ನು ಪ್ರಾರಂಭಿಸುವ ಅವಶ್ಯಕತೆಯನ್ನು ಫೌಂಡೇಷನ್ ಮನಗಂಡಿತು.

ವೇದಿಕೆಯನ್ನು ಪ್ರಾರಂಭಿಸುವ ಮೊದಲು ಶಿಕ್ಷಕ ಕಲಿಕಾ ಕೇಂದ್ರದ ಚಟುವಟಿಕೆಗಳ ಬಗೆಗೆ ಶಿಕ್ಷಕರಿಗಿದ್ದ ಅಭಿಪ್ರಾಯ:

ಶಿಕ್ಷಕ ಕಲಿಕಾ ಕೇಂದ್ರಗಳನ್ನು ಅನುಕೂಲಕರ ಮತ್ತು ಸುರಕ್ಷಿತ ಸ್ಥಳಗಳಲ್ಲಿ ಪ್ರಾರಂಭಿಸಿದ್ದರೂ ಈ ಮೇಲೆ ವಿವರಿಸಿದ ವಾತಾವರಣದಲ್ಲಿ ಮಹಿಳಾ ಶಿಕ್ಷಕರು ಶಿಕ್ಷಕ ಕಲಿಕಾ ಕೇಂದ್ರದ ಚಟುವಟಿಕೆಗಳಲ್ಲಿ ಭಾಗವಹಿಸುವುದು, ಅದರಲ್ಲೂ ಮುಖ್ಯವಾಗಿ ಪುರುಷ ಶಿಕ್ಷಕರ ಸಮ್ಮುಖದಲ್ಲಿ ಭಾಗವಹಿಸುವುದು ಅಷ್ಟು ಆರಾಮದಾಯಕವಾಗಿರಲಿಲ್ಲ. ಶಿಕ್ಷಕರು ಆಲೋಚಿಸಿದಂತೆ ಒಂದು ವೇಳೆ ಪುರುಷ ಶಿಕ್ಷಕರ ಜೊತೆ, ಸಂಜೆಯ ವೇಳೆಯಲ್ಲಿ ಟಿ.ಎಲ್.ಸಿ.ಯಲ್ಲಿ ಸಮಯ ಕಳೆಯುವುದನ್ನು ಈ ಸಮಾಜ ಗಮನಿಸಿದರೆ ಅವರ ಬಗ್ಗೆ ಕೆಟ್ಟ ಅಭಿಪ್ರಾಯಗಳು ಹುಟ್ಟುವ ಸಾಧ್ಯತೆಗಳು ಹೆಚ್ಚಿದ್ದವು. ಒಬ್ಬ ಶಿಕ್ಷಕರು ವ್ಯಕ್ತಪಡಿಸುವಂತೆ "ನಾನು ಟಿ.ಎಲ್.ಸಿ.ಗೆ ಭೇಟಿ ನೀಡಿದ ಎಲ್ಲ ಸಂದರ್ಭಗಳಲ್ಲಿ, ಟಿ.ಎಲ್.ಸಿ.ಯ ಎಲ್ಲ ಸ್ಥಳಗಳೂ ಪುರುಷ ಶಿಕ್ಷಕರಿಂದ ಆವರಿಸಿಕೊಂಡಿದ್ದವು. ಅವರು ಕೇರಂ ಮತ್ತು ಶಟಲ್ ಬ್ಯಾಡ್ಮಿಂಟನ್ ಆಟಗಳಲ್ಲಿ ತೊಡಗಿಕೊಂಡಿರುತ್ತಿದ್ದರು. ಮಹಿಳೆಯರು ಕುಳಿತು ಓದುವ ಅಥವಾ ಕಂಪ್ಯೂಟರ್ ಬಳಸುವ ಯಾವುದೇ ಅವಕಾಶಗಳೂ ಅಲ್ಲಿ ಇರಲಿಲ್ಲ." ಮಹಿಳಾ ಶಿಕ್ಷಕರ ಆತ್ಮವಿಶ್ವಾಸದ ಕೊರತೆ ಮತ್ತು ಅಧೈರ್ಯ ಅವರ ಇಂತಹ ಅಭಿಪ್ರಾಯಗಳಿಗೆ ಪುಷ್ಟಿಕೊಡುತ್ತವೆ. ಅದೇ ಶಿಕ್ಷಕರು ಮುಂದುವರಿದು ಹೀಗೆ ಹೇಳುತ್ತಾರೆ "ಒಮ್ಮೆ ನಾನು ಒಬ್ಬಳೇ ಹಾಗೂ ಇನ್ನೊಮ್ಮೆ ನನ್ನ ಸಹೋದ್ಯೋಗಿಯೊಡನೆ ಟಿ.ಎಲ್.ಸಿ. ಗೆ ಭೇಟಿ ನೀಡಿದ್ದಾಗ, ಅಲ್ಲಿದ್ದ ಗುಂಪು ನಮ್ಮ ಬಗ್ಗೆ ಲಘು ಟೀಕೆ ಮಾಡುತ್ತ ನಮ್ಮನ್ನು ನೋಡಿ ನಗಲು ಪ್ರಾರಂಭಿಸಿದಾಗ ಅದು ನಮಗೆ ಬಹಳ ಮುಜುಗರವನ್ನುಂಟುಮಾಡಿತು." ಇನ್ನೊಬ್ಬ ಶಿಕ್ಷಕರು ಅವರ ಮಾತಿಗೆ ದನಿಗೂಡಿಸುತ್ತ "ನಾನು ಟಿ.ಎಲ್.ಸಿ. ಯ ಚರ್ಚೆಗಳಲ್ಲಿ ಭಾಗವಹಿಸಲು ಹೆದರುತ್ತಿದ್ದೆ, ಯಾಕೆಂದರೆ ನನ್ನ ಆಲೋಚನೆಗಳನ್ನು, ಚಿಂತನೆಗಳನ್ನು ವ್ಯಕ್ತಪಡಿಸಿದಾಗ ಎಲ್ಲಿ ಪುರುಷ ಶಿಕ್ಷಕರು ನನ್ನನ್ನು ನೋಡಿ ನಗುತ್ತಾರೋ ಎಂದು ನಾನು ಮುಜುಗರಪಟ್ಟುಕೊಳ್ಳುತ್ತಿದ್ದೆ."

ದೂರದಲ್ಲಿ, ಒಂದು ವಿಶಾಲ ಮೈದಾನದ ಆವರಣದಲ್ಲಿದ್ದ ಒಂದು ಟಿ.ಎಲ್.ಸಿ.ಯ ಬಗ್ಗೆ ಒಬ್ಬ ಶಿಕ್ಷಕರು ಹೀಗೆ ಹೇಳುತ್ತಾರೆ, "ಸಂಜೆಯ ಸಮಯದಲ್ಲಿ ನಾನು ಇಲ್ಲಿಗೆ ಬರಲು ಹೆದರುತ್ತೇನೆ. ಯಾಕೆಂದರೆ ಇದು ದೂರ ಸ್ಥಳದಲ್ಲಿದೆಯಲ್ಲದೆ ಈ ಮೈದಾನವನ್ನು ಹುಡುಗರು ಕ್ರಿಕೆಟ್ ಆಡಲು, ಗಾಡಿಗಳನ್ನು ಪಾರ್ಕ್ ಮಾಡಲು ಬಳಸಿಕೊಳ್ಳುತ್ತಾರೆ. ಇಲ್ಲಿ ಹೆಚ್ಚು ಜನಸಂಚಾರ ಇರುವುದರಿಂದ ನಮಗೆ ಮುಜುಗರ

ಉಂಟಾಗುತ್ತದೆ, ಹಾಗಾಗಿ ನಾನು ದಿನದ ಸಮಯದಲ್ಲಿ ಟಿ.ಎಲ್.ಸಿ. ಗೆ ಭೇಟಿ ಕೊಡುತ್ತೇನೆ."

ಶಿಕ್ಷಕರೇ ಹೇಳುವಂತೆ ಇವೆಲ್ಲಕ್ಕಿಂತ ಅತಿ ಮುಖ್ಯವಾದ ಕಾರಣವೆಂದರೆ ಮಹಿಳಾ ಶಿಕ್ಷಕರು ಭಾಗವಹಿಸಲು ಅನುಕೂಲಕರವಾದ ವಾತಾವರಣ ಮತ್ತು ಚಟುವಟಿಕೆಗಳು ಟಿ.ಎಲ್.ಸಿ. ಯಲ್ಲಿ ನಡೆಯದೇ ಇರುವುದು. ಟಿ.ಎಲ್.ಸಿ.ಯ ಎಲ್ಲ ಚಟುವಟಿಕೆಗಳೂ ಮುಖ್ಯವಾಗಿ ಪುರುಷ ಶಿಕ್ಷಕರ ಪರವಾಗಿದ್ದವು.

ಈ ಮೇಲಿನ ಎಲ್ಲ ಕಾರಣಗಳ ಜೊತೆಯಲ್ಲಿ, ಮನೆಯ ಮತ್ತು ಶಾಲೆಯ ಕೆಲಸಗಳನ್ನು ಸರಿದೂಗಿಸಿಕೊಂಡು ಹೋಗುವ ಗುರುತರ ಜವಾಬ್ದಾರಿ ಕೂಡ ಮಹಿಳಾ ಶಿಕ್ಷಕರ ಮೇಲಿದ್ದುದರಿಂದ ಟಿ.ಎಲ್.ಸಿ. ಚಟುವಟಿಕೆಗಳಿಗೆ ಹೆಚ್ಚಿನ ಸಮಯವನ್ನು ಕೊಡಲು ಸಾಧ್ಯವಾಗುತ್ತಿರಲಿಲ್ಲ. ಒಬ್ಬ ಶಿಕ್ಷಕರು ಹೇಳುವಂತೆ "ನಾನು ಕೆಲವು ತಿಂಗಳುಗಳ ಹಿಂದೆ, ಧಾರವಾಡದಲ್ಲಿ ಫೌಂಡೇಷನ್ ಆಯೋಜಿಸಿದ್ದ ಕಾರ್ಯಾಗಾರದಲ್ಲಿ ಭಾಗವಹಿಸಿದ್ದೆ. ನನಗೆ ಕಾರ್ಯಾಗಾರದಲ್ಲಿನ ವಿಷಯದ ಕಡೆಗೆ ಹೆಚ್ಚು ಗಮನ ಕೊಡಲು ಸಾಧ್ಯವಾಗಲಿಲ್ಲ. ಯಾಕೆಂದರೆ ನಾನು ನನ್ನ ಚಿಕ್ಕ ಮಕ್ಕಳನ್ನು ಮನೆಯಲ್ಲಿ ಬಿಟ್ಟು ಬಂದಿದ್ದೆ, ಮಕ್ಕಳನ್ನು ಸಂಭಾಳಿಸಲು ಸಾಧ್ಯವಾಗುತ್ತಿಲ್ಲ. ನೀನು ಕಾರ್ಯಾಗಾರವನ್ನು ಬಿಟ್ಟು ಬೇಗ ಮರಳಿ ಬಾ ಎಂದು ಮನೆಯಿಂದ ಪದೇ ಪದೇ ಫೋನ್ ಬರುತ್ತಿತ್ತು. ಇದು ಕೇವಲ ಒಂದು ಕಾರ್ಯಾಗಾರದ ವಿಷಯ. ಇಂತಹ ಹಲವಾರು ಕಾರ್ಯಾಗಾರಗಳಲ್ಲಿ ಹಲವು ಸಮಸ್ಯೆಗಳು ನಮ್ಮನ್ನು ಕಾಡುವುದರಿಂದ ಹೆಚ್ಚು ಗಮನ ಕೊಡಲು ಆಗುವುದಿಲ್ಲ, ಅಲ್ಲದೆ ಇಂತಹ ಹೊರ ಪ್ರದೇಶಗಳಿಗೆ ಬಂದಾಗ ನಾವು ಸಂಜೆಯ ಸಮಯದಲ್ಲಿ ಮಾರುಕಟ್ಟೆಗೆ ಹೋಗಿ ಏನನ್ನೂ ಖರೀದಿಸಲು ಅನುಮತಿ ಇರುವುದಿಲ್ಲ."

ಜಿಲ್ಲೆಯ ಮಹಿಳೆಯರ ಪ್ರಸ್ತುತ ಸ್ಥಿತಿಗತಿ ಮತ್ತು ಮಹಿಳಾ ಶಿಕ್ಷಕರ ವೈಯಕ್ತಿಕ ಮತ್ತು ವೃತ್ತಿಪರ ಅಭಿವೃದ್ಧಿಗೆ ತೊಡಕಾಗಿದ್ದ ಈ ಎಲ್ಲ ಅಂಶಗಳನ್ನು ಕೂಲಂಕಶವಾಗಿ ಗಮನಿಸಿದಾಗ, ಶಿಕ್ಷಕ ಕಲಿಕಾ ಕೇಂದ್ರದ ಚಟುವಟಿಕೆಗಳಲ್ಲಿ ಮಹಿಳಾ ಶಿಕ್ಷಕರ ಭಾಗವಹಿಸುವಿಕೆಯ ಪ್ರಮಾಣ ಕಡಿಮೆ ಇರುವುದರ ಹಿಂದಿನ ಸ್ಪಷ್ಟ ಕಾರಣ ಮನದಟ್ಟಾಯಿತು. ಈ ಎಲ್ಲ ಸಮಸ್ಯೆಗಳನ್ನು ಎದುರಿಸಿ ಸಾಮಾಜಿಕ ಚಟುವಟಿಕೆಗಳಲ್ಲಿ ಮತ್ತು ವೃತ್ತಿಪರ ಅಭಿವೃದ್ಧಿಯಲ್ಲಿ ಅವರು ಭಾಗವಹಿಸುವಂತೆ ಮಾಡಲು ಅವರನ್ನು ಪ್ರೇರೇಪಿಸಿ ಪ್ರೋತ್ಸಾಹಿಸಲು ವಿಶೇಷವಾದ ಚಟುವಟಿಕೆಯ ಅಗತ್ಯವಿದೆ ಎಂಬುದನ್ನು ಫೌಂಡೇಷನ್‌ನ ಸದಸ್ಯರು ಮನಗಂಡು ಅವರಿಗಾಗಿ 'ಮಹಿಳಾ ಶಿಕ್ಷಕರ ವೇದಿಕೆ'ಯನ್ನು ಪ್ರಾರಂಭಿಸಿದರು.

## ಮಹಿಳಾ ಶಿಕ್ಷಕರ ವೇದಿಕೆಯು ಬೆಳೆದ ಹಾದಿ

ಹಲವಾರು ವರ್ಷಗಳ ಕೆಲಸದ ಅನುಭವದ ಆಧಾರದ ಮೇಲೆ ಹಂತಹಂತವಾಗಿ ಫೌಂಡೇಷನ್ ಸದಸ್ಯರು ಜಿಲ್ಲೆಯ ವಸ್ತುಸ್ಥಿತಿಯ ಆಳವಾದ ಮತ್ತು ಸೂಕ್ಷ್ಮವಾದ ವಿಷಯಗಳನ್ನು ಅರ್ಥೈಸಿಕೊಂಡಿದ್ದರು. ಮಹಿಳೆಯರ ಮೇಲೆ ಜಿಲ್ಲೆಯ ಸಾಮಾಜಿಕ–

ಸಾಂಸ್ಕೃತಿಕ ಹಿನ್ನೆಲೆಯ ಗಾಢವಾದ ಪ್ರಭಾವ ಇರುವುದನ್ನು ಅರಿತಿದ್ದರು. ಹಾಗೂ ಕೇವಲ ಟಿ.ಎಲ್.ಸಿ. ಯನ್ನು ಪ್ರಾರಂಭಿಸಿ, ಅದರ ಸಂಪನ್ಮೂಲವನ್ನು ಸುಲಭವಾಗಿ ಬಳಸಲು ಅನುಕೂಲ ಮಾಡಿಕೊಡುವುರಿಂದ ಮಹಿಳಾ ಶಿಕ್ಷಕರನ್ನು ಟಿ.ಎಲ್.ಸಿ. ಯೆಡೆಗೆ ಆಕರ್ಷಿಸಲು ಸಾಧ್ಯವಿಲ್ಲ. ಬದಲಿಗೆ ತಾವು ಸಾಮಾಜಿಕ–ಆರ್ಥಿಕವಾಗಿ ಸುರಕ್ಷಿತವಾಗಿದ್ದೇವೆ ಎಂಬ ಭಾವನೆಯನ್ನು ಅವರಲ್ಲಿ ತರುವುದು ಬಹಳ ಮುಖ್ಯವಾದ ಅಂಶ ಎಂಬುದನ್ನು ಮನಗಂಡರು. ಮಹಿಳಾ ಶಿಕ್ಷಕರು ವೈಯಕ್ತಿಕವಾಗಿ ಮತ್ತು ವೃತ್ತಿಪರವಾಗಿ ತಮ್ಮ ಹಕ್ಕುಗಳನ್ನು ಅರ್ಥಮಾಡಿಕೊಳ್ಳಲು, ಪಡೆಯಲು ಮತ್ತು ತಮ್ಮ ಆಯ್ಕೆಗಳನ್ನು ವ್ಯಕ್ತಪಡಿಸಲು ಶಕ್ಯವಾಗುವಂತೆ ಅವರನ್ನು ಸಬಲರನ್ನಾಗಿ ಮಾಡುವುದು ಮುಖ್ಯ ಎಂಬುದನ್ನು ಕೂಡ ತಂಡ ಅರ್ಥಮಾಡಿಕೊಂಡಿತು.

ಈ ಕಾರಣದಿಂದ ಮಹಿಳಾ ಶಿಕ್ಷಕರಿಗಾಗಿ ಸುರಕ್ಷಿತವಾದ, ಅನುಕೂಲಕರವಾದ ಮತ್ತು ಅವರ ಆಸಕ್ತಿಗೆ ಅನುಗುಣವಾದ ವಿಶೇಷವಾದ ವೇದಿಕೆಯನ್ನು ಪ್ರಾರಂಭಿಸುವ ಯೋಚನೆಯು ಫೌಂಡೇಷನ್ ಸದಸ್ಯರಲ್ಲಿ ಮೂಡಿತು. ಮಹಿಳಾ ಶಿಕ್ಷಕರೊಂದಿಗೆ ಚಟುವಟಿಕೆಯಲ್ಲಿ ತೊಡಗಲು ವಿವಿಧ ಯೋಜನೆಗಳು ಮತ್ತು ಸಂಪನ್ಮೂಲಗಳನ್ನು ಕ್ರೋಢೀಕರಿಸಲಾಯಿತು. ಪ್ರಾಥಮಿಕ ಹಂತವಾಗಿ ಸುದೀರ್ಘವಾದ ಶಾಲಾ ಭೇಟಿಯನ್ನು ಮಾಡಿ ಮಹಿಳಾ ಶಿಕ್ಷಕರ ಪೂರ್ಣ ಮಾಹಿತಿ, ಅವರ ಶಾಲೆ, ಬೋಧಿಸುವ ವಿಷಯ, ಅವರ ಆಸಕ್ತಿಗಳನ್ನು ಗುರುತಿಸಲಾಯಿತು. ಈ ಕೆಲಸಕ್ಕಾಗಿ ಪ್ರತಿಯೊಬ್ಬ ಸದಸ್ಯರಿಗೂ ಕೆಲವು ವಲಯಗಳನ್ನು ಹಂಚಲಾಯಿತು. ಈ ಮಾಹಿತಿಯ ಹಿನ್ನೆಲೆಯಿಂದ ಸಮಾನ ಆಸಕ್ತಿಯಿರುವ ಮಹಿಳಾ ಶಿಕ್ಷಕರ ಗುಂಪುಗಳನ್ನು ರಚಿಸಲಾಯಿತು ಮತ್ತು ಅವರನ್ನು ಟಿ.ಎಲ್.ಸಿ.ಯ ವಿಶೇಷ ಚಟುವಟಿಕೆಗಳಲ್ಲಿ ಭಾಗವಹಿಸಲು ಆಹ್ವಾನಿಸಲಾಯಿತು.

ಸ್ವಯಂಪ್ರೇರಿತ ಶಿಕ್ಷಕರ ವೇದಿಕೆಯಲ್ಲಿ (Voluntary Teacher Forum – ವಿ.ಟಿ.ಎಫ್.) ನಿರಂತರವಾಗಿ ಭಾಗವಹಿಸುವ ಕೆಲವು ಶಿಕ್ಷಕಿಯರನ್ನು, ತಮ್ಮ ಮಹಿಳಾ ಸಹೋದ್ಯೋಗಿಗಳನ್ನು ವೇದಿಕೆಯಲ್ಲಿ ಭಾಗವಹಿಸುವಂತೆ ಪ್ರೋತ್ಸಾಹಿಸಲು ಕೋರಲಾಯಿತು. ಶಿಕ್ಷಕಿಯರ ಸಂವಹನಕ್ಕೆ ಮತ್ತು ಬಳಕೆಗೆ ಅನುಕೂಲವಾಗಲು ಟಿ.ಎಲ್.ಸಿ.ಯಲ್ಲಿ ಮಹಿಳಾ ಸಂಯೋಜಕರನ್ನು ನೇಮಕ ಮಾಡಲಾಯಿತು. ಕೆಲವು ಟಿ.ಎಲ್.ಸಿ.ಗಳಲ್ಲಿ 'ಮಹಿಳಾ ಸಾಕ್ಷರತಾ ಕಾರ್ಯಕ್ರಮ'ದ* ಕೆಲವು ಸ್ವಯಂ ಸೇವಕರನ್ನು ಬಳಸಿಕೊಳ್ಳಲಾಯಿತು. ಈ ಸ್ವಯಂ ಸೇವಕರು ನಿರಂತರ ಶಾಲಾ ಭೇಟಿಯ ಮೂಲಕ ಶಿಕ್ಷಕರನ್ನು ಸಂದರ್ಶಿಸಿ ಅವರನ್ನು ವೇದಿಕೆಗೆ ಆಹ್ವಾನಿಸಿದರು.

---

* ಮಹಿಳಾ ಸಾಕ್ಷರತಾ ಕಾರ್ಯಕ್ರಮ: ಇದು ಸುರಪುರ ತಾಲೂಕಿನಲ್ಲಿ, 2014ರಲ್ಲಿ ನಡೆಸಿದ ಒಂದು ಪ್ರಾಯೋಗಿಕ ಕಾರ್ಯಕ್ರಮ. ಆರ್ಥಿಕ ಕಾರಣಗಳಿಂದ ಶಾಲೆಯಿಂದ ಹೊರಗುಳಿದ (ತರಗತಿ 11 ಮತ್ತು 12ರ ನಂತರ) ಆದರೆ ಕಲಿಕೆಯಲ್ಲಿ ಆಸಕ್ತಿ ಇರುವ ಯುವ ಹೆಣ್ಣುಮಕ್ಕಳನ್ನು ಗುರುತಿಸಿ, ಅವರಿಗೆ ವಿದ್ಯಾರ್ಥಿವೇತನ ಒದಗಿಸಿ, ಅವರ ಬಿಡುವಿನ ವೇಳೆಯನ್ನು ಆಯಾ ಗ್ರಾಮದ ಮಹಿಳೆಯರಿಗೆ ಮೂಲ ಸಾಕ್ಷರತೆಯನ್ನು ಒದಗಿಸುವ ಕೆಲಸದಲ್ಲಿ ಬಳಸಿಕೊಳ್ಳಲಾಗಿತ್ತು.

ಅನಂತರ ಮಹಿಳಾ ಶಿಕ್ಷಕರ ವೇದಿಕೆಯನ್ನು ಯಾವ ಸಮಯದಲ್ಲಿ ನಡೆಸಬೇಕು ಎಂಬುದು ಆರಂಭಿಕ ಸವಾಲಾಗಿತ್ತು. ವೇದಿಕೆಯನ್ನು ಶಾಲಾ ಅವಧಿಯಲ್ಲೇ ನಡೆಸಬೇಕು ಎಂಬುದು ಕೆಲವು ಶಿಕ್ಷಕರ ದೃಢ ಅಭಿಪ್ರಾಯವಾಗಿತ್ತು. ಆದರೆ ಇದು ಸ್ವಯಂಪ್ರೇರಿತ ಭಾಗವಹಿಸುವಿಕೆಯ ತತ್ವ, ಸ್ವಭಾವ ಹಾಗೂ ಶಿಕ್ಷಣ ಇಲಾಖೆಯನ್ನು ಒಳಗೊಳ್ಳದಂತೆ ನಡೆಸುವ ವೇದಿಕೆಯಾದುದರಿಂದ ಈ ಅಭಿಪ್ರಾಯಕ್ಕೆ ಮನ್ನಣೆ ಸಿಗಲಿಲ್ಲ. ಈ ಹಿಂದೆ ವಿವರಿಸಿದ ಸಾಮಾಜಿಕ–ಸಾಂಸ್ಕೃತಿಕ ಪ್ರಭಾವಗಳಿಂದ ಸಂಜೆಯ ಸಮಯದಲ್ಲೂ ವೇದಿಕೆಯನ್ನು ನಡೆಸಲು ಕೆಲವು ಶಿಕ್ಷಕಿಯರು ಒಮ್ಮತ ಸೂಚಿಸಲಿಲ್ಲ. ಹೀಗೆ ಹತ್ತಾರು ಜಿಜ್ಞಾಸೆಗಳ ಫಲವಾಗಿ ಲಾಕ್ಷಣಿಕವಾದ ಮಹಿಳಾ ಶಿಕ್ಷಕರ ವೇದಿಕೆಯನ್ನು ಶನಿವಾರದ ಮಧ್ಯಾಹ್ನ ಶಾಲಾ ಅವಧಿಯ ನಂತರ ನಡೆಸಲು ನಿರ್ಧರಿಸಲಾಯಿತು. ಆದಾಗ್ಯೂ ಶಿಕ್ಷಕಿಯರ ಆಸಕ್ತಿ, ಕೋರಿಕೆ ಮತ್ತು ಸಂದರ್ಭಗಳಿಗೆ ಅನುಗುಣವಾಗಿ ವೇದಿಕೆಯ ಸಮಯದಲ್ಲಿ ಆಗಾಗ ಬದಲಾವಣೆಗಳು ಆಗುತ್ತಿರುತ್ತವೆ. ಈಗ ಎಲ್ಲಾ ಶಿಕ್ಷಕರ ಒಮ್ಮತ ಅಭಿಪ್ರಾಯದ ಮೇರೆಗೆ ಕೆಲವು ವೇದಿಕೆಗಳನ್ನು ಶಾಲಾ ಅವಧಿಯ ನಂತರ ಸಂಜೆಯ ಸಮಯದಲ್ಲಿ, ಭಾನುವಾರ ಮತ್ತು ಇತರ ರಜಾ ದಿನಗಳಲ್ಲೂ ನಡೆಸಲಾಗುತ್ತಿದೆ.

## ವಿಶೇಷ ಚಟುವಟಿಕೆಗಳ ಆಯೋಜನೆ

ಹೆಚ್ಚಿನ ಸಂಖ್ಯೆಯಲ್ಲಿ ಶಿಕ್ಷಕಿಯರನ್ನು ತಲುಪಲು ಮತ್ತು ಟಿ.ಎಲ್.ಸಿ. ಚಟುವಟಿಕೆಗಳಲ್ಲಿ ಅವರನ್ನು ಭಾಗವಹಿಸುವಂತೆ ಪ್ರೋತ್ಸಾಹಿಸಲು ಅವರಿಗಾಗಿ ಸಮ್ಮೇಳನಗಳು, ಮಹಿಳಾ ದಿನಾಚರಣೆಗಳು ಮತ್ತು ಶಿಕ್ಷಕರ ದಿನಾಚರಣೆಗಳಂತಹ ಹಲವಾರು ವಿಶೇಷ ಚಟುವಟಿಕೆಗಳನ್ನು ಆಯೋಜಿಸಲಾಯಿತು. ಜಿಲ್ಲೆಯ ವಿವಿಧ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ಮಹಿಳಾ ಅಧಿಕಾರಿಗಳನ್ನು, ಸಂಪನ್ಮೂಲ ವ್ಯಕ್ತಿಗಳನ್ನು ಆಹ್ವಾನಿಸಿ ಶಿಕ್ಷಕಿಯರಲ್ಲಿ ಸ್ಫೂರ್ತಿ ತುಂಬುವಂತೆ ಮಾಡಲಾಯಿತು. ಇಂತಹ ದೊಡ್ಡ ದೊಡ್ಡ ಕಾರ್ಯಕ್ರಮಗಳು ವಿಶೇಷ ಆಸಕ್ತಿಯುಳ್ಳ ಶಿಕ್ಷಕರನ್ನು ಗುರುತಿಸಲು ಮತ್ತು ಅವರು ವೇದಿಕೆಯ ನಿರಂತರ ಸದಸ್ಯರಾಗುವಂತೆ ಮಾಡಲು ಸಹಾಯ ಮಾಡಿದವು.

ಮಹಿಳಾ ದಿನಾಚರಣೆಯಂತಹ ವಿಶೇಷ ಸಂದರ್ಭಗಳಲ್ಲಿ ಶಿಕ್ಷಕರಿಗೆ ಪ್ರತ್ಯೇಕವಾದ ಅವಕಾಶಗಳನ್ನು ಒದಗಿಸಲು ವಿಚಾರ ಸಂಕಿರಣಗಳನ್ನು ಆಯೋಜಿಸಲಾಯಿತು. ಇಲ್ಲಿ ಶಿಕ್ಷಕರು ತಮ್ಮ ಆಸಕ್ತಿಯ ವಿಷಯಗಳಾದ ಸಮಾನತೆ, ಸಮಾಜದಲ್ಲಿ ಮಹಿಳೆಯರಿಗೆ ಇರುವ ಅವಕಾಶಗಳು, ಲಿಂಗ ತಾರತಮ್ಯತೆ ಮತ್ತು ಸರಕಾರಿ ಹುದ್ದೆಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಮುಂತಾದ ವಿಷಯಗಳ ಮೇಲೆ ಪತ್ರಿಕೆಗಳನ್ನು ಸಿದ್ಧಪಡಿಸಿ ಮಂಡಿಸಲು ಬೇಕಾದ ಎಲ್ಲಾ ಸಹಾಯ ಮತ್ತು ಪ್ರೋತ್ಸಾಹವನ್ನು ನೀಡಲಾಯಿತು. ಇಂತಹ ವಿಚಾರ ಸಂಕಿರಣಗಳಲ್ಲಿ ಪತ್ರಿಕೆ ಮಂಡಿಸಿದ ಮತ್ತು ಭಾಗವಹಿಸಿದ ಶಿಕ್ಷಕರ ಆತ್ಮವಿಶ್ವಾಸ ಹೆಚ್ಚಾಯಿತು ಮತ್ತು ತಮ್ಮನ್ನು ತಾವೇ

ಹುರಿದುಂಬಿಸಿಕೊಳ್ಳಲು ಒಂದು ವೇದಿಕೆಯಾಗಿ ಪರಿಣಮಿಸಿತು. ವಿಚಾರ ಸಂಕಿರಣದ ನಂತರ ಅವರು ಸಂತೋಷದಿಂದ ಹಂಚಿಕೊಂಡಿದ್ದೇನೆಂದರೆ, "ಇದು ನಮ್ಮ ವೃತ್ತಿ ಜೀವನದಲ್ಲಿಯೇ ಮೊದಲ ಬಾರಿ ಒಂದು ವೇದಿಕೆಯ ಮೇಲೆ ನಿಂತು ಸರಿಸುಮಾರು 200 ಜನರ ಎದುರು ನಮ್ಮ ಪತ್ರಿಕೆಯನ್ನು ಮಂಡಿಸಿದ್ದು, ನಮ್ಮಲ್ಲಿ ಧೈರ್ಯ ಮತ್ತು ಉತ್ಸಾಹ ತುಂಬಿಸಿತು. ಹಾಗೂ ಮುಂದಿನ ಇಂತಹ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಮಾಡಲು ದಾರಿಯನ್ನು ತೋರಿಸಿತು." ತದನಂತರ ಮುಂದಿನ ದಿನಗಳಲ್ಲಿ ಇಂತಹ ಹಲವು ಅವಕಾಶಗಳನ್ನು ಒದಗಿಸುವಂತೆ ಶಿಕ್ಷಕಿಯರು ಫೌಂಡೇಷನ್ ಸದಸ್ಯರಲ್ಲಿ ಕೇಳಿಕೊಂಡರು. ಈ ಚಟುವಟಿಕೆಗೆ ಶಿಕ್ಷಕರಿಂದ ಸಿಕ್ಕ ಗುಣಾತ್ಮಕ ಪ್ರತಿಕ್ರಿಯೆ ಫೌಂಡೇಷನ್ ತಂಡದಲ್ಲಿ ಒಂದು ಆಶಾಕಿರಣವನ್ನು ಹುಟ್ಟಿಸಿತು ಮತ್ತು ಶಿಕ್ಷಕಿಯರ ಶಿಕ್ಷಕ ವೇದಿಕೆಗಳ ಮೂಲಕ ಶಿಕ್ಷಕಿಯರನ್ನು ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳಲು ದಾರಿಯನ್ನು ಒದಗಿಸಿತು.

ವೇದಿಕೆಯಲ್ಲಿ ಭಾಗವಹಿಸುತ್ತಿರುವ ಶಿಕ್ಷಕರ ಚಿಕ್ಕ ಚಿಕ್ಕ ಗುಂಪುಗಳಿಗೆ, ಲಿಂಗ ಅಸಮಾನತೆ, ಮಹಿಳಾ ಆರೋಗ್ಯ ಮತ್ತು ಹಕ್ಕುಗಳು ಮುಂತಾದ ವಿಷಯಗಳಲ್ಲಿ ಅವರ ಜ್ಞಾನವನ್ನು ಹೆಚ್ಚಿಸುವ ಸಲುವಾಗಿ ಹಲವಾರು ಕಾರ್ಯಾಗಾರಗಳನ್ನು ಹಮ್ಮಿಕೊಳ್ಳಲಾಯಿತು. ಉದಾಹರಣೆಗೆ: ಲಿಂಗ ಸಮಾನತೆ ಮುಂತಾದ ವಿಷಯಗಳಲ್ಲಿ ಪರಿಣತಿಯನ್ನು ಪಡೆದ ಸಂಪನ್ಮೂಲ ವ್ಯಕ್ತಿಯನ್ನು ಆಹ್ವಾನಿಸಿ ಕಾರ್ಯಾಗಾರವನ್ನು ನಡೆಸಲಾಯಿತು. ಇಲ್ಲಿ ಲಿಂಗ ತಾರತಮ್ಯತೆ, ಕೌಟುಂಬಿಕ ಹಿಂಸೆಗಳು, ಹದಿಹರೆಯದ ಸಮಸ್ಯೆಗಳು ಮುಂತಾದ ವಿಷಯಗಳ ಮೇಲೆ ಚರ್ಚೆ ನಡೆಸಲಾಯಿತು. ಇನ್ನೊಂದು ಕಾರ್ಯಾಗಾರದಲ್ಲಿ ಮಹಿಳಾ ಪೊಲೀಸ್ ಅಧಿಕಾರಿ ಮತ್ತು ಕಾನೂನು ತಜ್ಞರನ್ನು ಆಹ್ವಾನಿಸಿ ಅವರ ಮೂಲಕ ಮಹಿಳೆಯರನ್ನು ರಕ್ಷಿಸುವ ಕಾನೂನು ಮತ್ತು ಮಹಿಳಾ ಹಕ್ಕುಗಳ ಬಗ್ಗೆ ವಿವರವಾದ ಚರ್ಚೆಯನ್ನು ಕೈಗೊಳ್ಳಲಾಯಿತು.

ಈ ಎಲ್ಲ ವಿಷಯಗಳ ಅರಿವು ಮೂಡಿದ ನಂತರ ಹಲವು ಶಿಕ್ಷಕರು ಈ ಹಿಂದೆ ಅವರಿಗಾದ ಅನ್ಯಾಯಗಳನ್ನು ನೆನಪಿಸಿಕೊಂಡು, ಶಿಕ್ಷಿತರಾಗಿದ್ದು, ಉತ್ತಮ ಉದ್ಯೋಗದಲ್ಲಿದ್ದರೂ ಇಂತಹ ವಿಚಾರಗಳಿಂದ ವಂಚಿತರಾಗಿದ್ದಕ್ಕೆ ವ್ಯಥೆಪಟ್ಟರು. ಒಬ್ಬ ಶಿಕ್ಷಕಿ ಹೇಳುವಂತೆ "ಈ ವೇದಿಕೆಯಲ್ಲಿ ನಮ್ಮ ಜೀವನಕ್ಕೆ ಹತ್ತಿರವಾದ ವಿಷಯಗಳ ಕುರಿತು ನಾವು ಚರ್ಚಿಸುತ್ತೇವೆ. ಇದು ನಮ್ಮನ್ನು ಗಟ್ಟಿಗೊಳಿಸುತ್ತದೆ ಮತ್ತು ಈ ಸಮಾಜದೊಂದಿಗೆ ವ್ಯವಹರಿಸಲು ಸಹಾಯ ಮಾಡುತ್ತದೆ. ನಾವು ಮಹಿಳಾ ಪೊಲೀಸ್ ಅಧಿಕಾರಿಯೊಂದಿಗೆ ಚರ್ಚಿಸಿದೆವು ಮತ್ತು ಈಗ ನಮಗೆ ಕಳ್ಳತನ, ಅಪಘಾತ ಮತ್ತು ಪೀಡನೆಗಳಂತಹ ಸಮಸ್ಯೆ ಎದುರಾದಾಗ ಹೇಗೆ ಅದನ್ನು ಎದುರಿಸಬೇಕು ಎಂಬುದರ ಅರಿವಾಗಿದೆ. ನಮ್ಮನ್ನು ನಾವು ಹೇಗೆ ರಕ್ಷಿಸಿಕೊಳ್ಳಬೇಕು, ಕಾನೂನು ನಮ್ಮ ಬಗ್ಗೆ ಏನು ಹೇಳುತ್ತದೆ ಎಂಬುದರ ಸಂಪೂರ್ಣ ಅರಿವಿದೆ. ಈಗ ಈ ವಿಷಯಗಳನ್ನು ನಾವು ನಮ್ಮ ಶಾಲೆಯ ಮಕ್ಕಳು ಮತ್ತು ಸಹೋದ್ಯೋಗಿಗಳೊಂದಿಗೂ ಹಂಚಿಕೊಳ್ಳುತ್ತೇವೆ. ನಮಗೆ

ಎಲ್ಲ ಸಮಸ್ಯೆಗಳನ್ನು ಪರಿಹರಿಸುವ ಶಕ್ತಿ ಇಲ್ಲದಿರಬಹುದು, ಆದರೆ ನಾವು ಕೆಲಸ ನಿರ್ವಹಿಸುತ್ತಿರುವ ನಮ್ಮ ಸುತ್ತಮುತ್ತಲಿನ ಜನರನ್ನು ಇಂತಹ ವಿಷಯಗಳ ಬಗ್ಗೆ ಶಿಕ್ಷಿತರನ್ನಾಗಿ ಮಾಡಲು ಖಂಡಿತ ಪ್ರಯತ್ನಿಸುತ್ತೇವೆ."

ಮಹಿಳಾ ಶಿಕ್ಷಕರ ವೇದಿಕೆಯ ಇಂತಹ ವಿಶೇಷ ಅಧಿವೇಶನಗಳ ಮೌಲ್ಯವನ್ನು ಅರಿತ ಒಬ್ಬ ಶಿಕ್ಷಕಿ ಹೀಗೆ ಹೇಳುತ್ತಾರೆ "ಸಮಾಜದ ಪ್ರತಿಷ್ಠಿತ ಅವಕಾಶಗಳನ್ನು ಕೇವಲ ಪುರುಷರೇ ಅನುಭವಿಸುತ್ತಿದ್ದಾರೆ. ಮಹಿಳೆಯರ ಸಾಧನೆ ಮತ್ತು ಪ್ರಯತ್ನಗಳನ್ನು ಯಾರೂ ಗೌರವಿಸುತ್ತಿಲ್ಲ. ಅವರು ನಮ್ಮ ಬಗ್ಗೆ ಯಾವಾಗಲೂ ಋಣಾತ್ಮಕವಾಗಿ ಯೋಚಿಸುತ್ತಾರೆ. ಪುರುಷರು ಏನನ್ನಾದರೂ ಸಾಧಿಸಿದರೆ ಅವರಿಗೆ ಅದನ್ನು ಸಂಭ್ರಮಿಸಲು ಹಲವಾರು ದಾರಿಗಳಿವೆ. ಆದರೆ ಮಹಿಳೆ ಏನನ್ನಾದರೂ ಸಾಧಿಸಿದರೆ ಅವಳನ್ನು 'ಗಂಡುಬೀರಿ' ಎಂದು ಕರೆಯುತ್ತಾರೆ. ಹಾಗೂ ನಮ್ಮನ್ನು ಸಮಾನರನ್ನಾಗಿ ಪರಿಗಣಿಸುವುದಿಲ್ಲ. ಆದರೆ ಇವತ್ತು ನಾನು 'ಮಾಸ್ಟರ್ ಸಂಪನ್ಮೂಲ ವ್ಯಕ್ತಿ'ಯಾಗಿ ಕಾರ್ಯ ನಿರ್ವಹಿಸುತ್ತಿದ್ದೇನೆ, ಶಿಕ್ಷಕ ಕಲಿಕಾ ಕೇಂದ್ರ ಮತ್ತು ಮಹಿಳಾ ಶಿಕ್ಷಕರ ವೇದಿಕೆ ನನಗೆ ಇಂತಹ ಚಟುವಟಿಕೆಗಳಲ್ಲಿ ಭಾಗವಹಿಸಲು ಪ್ರೋತ್ಸಾಹ ನೀಡುತ್ತಿದೆ. ಇಂತಹ ಅವಕಾಶ ಮತ್ತು ಪ್ರೋತ್ಸಾಹ ಪ್ರತಿಯೊಬ್ಬ ಶಿಕ್ಷಕಿಗೂ ದೊರೆಯಬೇಕು."

(ಮುಂದಿನ ಪುಟದಲ್ಲಿದೆ.)

## ವೇದಿಕೆಯಲ್ಲಿ ಚರ್ಚಿತವಾಗುವ ವಿಷಯಗಳು

ಪ್ರಾರಂಭಿಕ ಹಂತಗಳಲ್ಲಿ, ಮಹಿಳಾ ಶಿಕ್ಷಕರ ವೇದಿಕೆಗಳಲ್ಲಿ, ಮುಖ್ಯವಾಗಿ ಶಿಕ್ಷಕಿಯರ ವೈಯಕ್ತಿಕ ಸಮಸ್ಯೆಗಳು ಮತ್ತು ಆಸಕ್ತಿಗೆ ಅನುಗುಣವಾದ ವಿಷಯಗಳು ಚರ್ಚಿತವಾಗುತ್ತಿದ್ದವು. ಅವುಗಳಲ್ಲಿ ಆಯ್ದ ಕೆಲವು ಉದಾಹರಣೆಗಳೆಂದರೆ: ಕಲೆ ಮತ್ತು ಕಸೂತಿ, ಯೋಗದ ಪ್ರಯೋಜನಗಳು, ಗಣಕಯಂತ್ರದ ಮೂಲ ಪರಿಕಲ್ಪನೆಗಳು, ಲಿಂಗ ತಾರತಮ್ಯತೆ, ಮಹಿಳಾ ಸಬಲೀಕರಣ, ಆರೋಗ್ಯ ಮತ್ತು ಸ್ವಚ್ಛತೆ, ಮಹಿಳೆಯರಿಗಾಗಿ ಕಾನೂನು, ಕಥೆ ಹೇಳುವುದು, ಜೀವನದ ಸಂತೋಷಗಳು ಮತ್ತು ಸ್ವ-ಪ್ರೇರಣೆ ಮುಂತಾದವುಗಳು. ಇಂತಹ ಹಲವು ವಿಷಯಗಳ ಮೇಲಿನ ಚರ್ಚೆ ಶಿಕ್ಷಕಿಯರ ಮನಸ್ಸಿನ ಭಾವನೆಗಳನ್ನು ಸ್ಪರ್ಶಿಸಿತು ಮತ್ತು ಸುರಕ್ಷಿತವಾದ ತಮ್ಮದೇ ಸಾಮಾಜಿಕ ಗುಂಪುಗಳಲ್ಲಿ ಸೇರಲು, ಅಭಿಪ್ರಾಯಗಳನ್ನು ವ್ಯಕ್ತಪಡಿಸಲು, ಚಟುವಟಿಕೆಗಳಲ್ಲಿ ಭಾಗವಹಿಸಿ ಪರಸ್ಪರ ಸಂತೋಷವನ್ನು ಹಂಚಿಕೊಳ್ಳುವ ಅವಕಾಶಗಳನ್ನು ಸೃಷ್ಟಿಸಿತು. ಇಂತಹ ಚರ್ಚೆಗಳಲ್ಲಿ ಭಾಗವಹಿಸುತ್ತ, ಹಂತ ಹಂತವಾಗಿ, ಶಿಕ್ಷಕಿಯರು ಮಹಿಳಾ ಶಿಕ್ಷಕರ ವೇದಿಕೆಗಳಿಗೆ ಹತ್ತಿರವಾಗತೊಡಗಿದರು. ಸಾಮಾನ್ಯ ವಿಷಯಗಳ ಚರ್ಚೆಯು ಅವರ ವೃತ್ತಿಪರ ಅಭಿವೃದ್ಧಿಗೆ ಪೂರಕವಾಗುವ ನೇರವಾದ ಮೂಲ ವಿಷಯಗಳ ಚರ್ಚೆಗಳಾಗಿ ಬದಲಾಯಿತು. ಉದಾಹರಣೆಗೆ, ಶೈಕ್ಷಣಿಕ ದೃಷ್ಟಿಕೋನ, ಮಕ್ಕಳು ಹೇಗೆ ಕಲಿಯುತ್ತಾರೆ ಎಂಬುದನ್ನು ಅರ್ಥೈಸಿಕೊಳ್ಳುವುದು, ದೈಹಿಕ ಮತ್ತು ಮಾನಸಿಕ ಶಿಕ್ಷೆಯಿಂದ ಮಕ್ಕಳ ಮೇಲಾಗುವ ಪರಿಣಾಮಗಳು ಮತ್ತು

## ಯಾದಗಿರಿ ಜಿಲ್ಲೆ ಮಹಿಳಾ ಶಿಕ್ಷಕರ ವೇದಿಕೆಯಲ್ಲಿ ಭಾಗವಹಿಸಿದ ಶಿಕ್ಷಕಿಯರ ಅಂಕಿ–ಅಂಶ

| ಶಿಕ್ಷಕ ಕಲಿಕಾ ಕೇಂದ್ರಗಳು | ಶಿಕ್ಷಕ ಕಲಿಕಾ ಕೇಂದ್ರಗಳ ಸುತ್ತಮುತ್ತ (5 ಕಿ.ಮೀ. ವ್ಯಾಪ್ತಿ) ವಾಸಿಸುವ ಶಿಕ್ಷಕಿಯರ ಸಂಖ್ಯೆ | ಮಹಿಳಾ ಶಿಕ್ಷಕರ ವೇದಿಕೆಯಲ್ಲಿ ಭಾಗವಹಿಸಿದ ಒಟ್ಟು ಶಿಕ್ಷಕಿಯರ ಸಂಖ್ಯೆ | ಶೇಕಡ (%) | ಮಹಿಳಾ ಶಿಕ್ಷಕಿಯರ ವೇದಿಕೆಯ ಸಭೆಗಳು/ಚಟುವಟಿಕೆಗಳು (2014ರಿಂದ 2017ರವರೆಗೆ) | ಚಟುವಟಿಕೆಯಲ್ಲಿ ಸರಾಸರಿ ಭಾಗವಹಿಸುವಿಕೆ ಪ್ರಮಾಣ |
|---|---|---|---|---|---|
| ಸುರಪುರ | 149 | 120 | 80.5 | 13 | 12 |
| ಕೆಂಭಾವಿ | 96 | 58 | 60.4 | 14 | 10 |
| ನಾರಾಯಣಪುರ | 34 | 31 | 91.2 | 12 | 10 |
| ಹುಣಸಿಗಿ | 60 | 32 | 53.3 | 4 | 10 |
| ಶಹಾಪುರ | 121 | 26 | 21.5 | 3 | 20 |
| ಕಕ್ಕೆರಾ | 20 | 13 | 65.0 | 3 | 16 |
| ಚಾಮನಾಳ | 40 | 10 | 25.0 | 4 | 13 |
| **ಒಟ್ಟು** | **520** | **290** | **55.7** | **53** | **10** |

**ಮಹಿಳಾ ಶಿಕ್ಷಕರ ವೇದಿಕೆಯಲ್ಲಿ ಚರ್ಚಿತವಾದ ವಿಷಯಗಳು**

| ಸಾಮಾನ್ಯ ಚರ್ಚೆಯ ವಿಷಯಗಳು ಚರ್ಚೆಯ ವಿಷಯಗಳು | ಮಹಿಳಾ ಸಬಲೀಕರಣಕ್ಕೆ ಸಂಬಂಧಿಸಿದ ವಿಷಯಗಳು | ಶೈಕ್ಷಣಿಕ ಚರ್ಚೆಯ |
|---|---|---|
| • ಕಲೆ ಮತ್ತು ಕಸೂತಿ<br>• ಜೀವನದ ಕೆಲವು ಸಂತೋಷದ ಕ್ಷಣಗಳು<br>• ಯೋಗದ ಪ್ರಯೋಜನಗಳು<br>• ನನ್ನ ಜೀವನದ ಭವಿಷ್ಯದ ಯೋಚನೆಗಳು ಮತ್ತು ಮಾರ್ಗಗಳು (ಜೀವನದ ಗುರಿಗಳು)<br>• ಆರೋಗ್ಯ ಮತ್ತು ಸ್ವಚ್ಛತೆ<br>• ಅಡುಗೆಯ ವಿಧಾನ<br>• ಗಣಕ ಯಂತ್ರದ ಮೂಲ ಪರಿಕಲ್ಪನೆಗಳು – ಲಿಂಗ ತಾರತಮ್ಯತೆ | • ಮಹಿಳಾ ಸಬಲೀಕರಣ<br>• ಮಹಿಳೆ ಮತ್ತು ಕಾನೂನು<br>• ಜಾನಪದ ಸಾಹಿತ್ಯ ಮತ್ತು ಮಹಿಳೆ<br>• ಸ್ವ–ಪ್ರೇರಣೆ<br>• ಕೌಟುಂಬಿಕ ಹಿಂಸೆಗಳು<br>• ಹದಿಹರೆಯದ ಸವಾಲುಗಳು<br>• ಸಮಾನತೆ ಮತ್ತು ಮಹಿಳೆ<br>• ಸಮಾಜದಲ್ಲಿ ಮಹಿಳೆಯರಿಗೆ ಇರುವ ಅವಕಾಶಗಳು – ಶಿಕ್ಷಕ ಮತ್ತು ಬೋಧನೆ | • ಶಿಕ್ಷಣ: ಏನು ಮತ್ತು ಏಕೆ?<br>• ಶಿಕ್ಷಣ ಮತ್ತು ಭಯ<br>• ಬಾಲ ಕಾರ್ಮಿಕರು ಮತ್ತು ಅವರ ಶಿಕ್ಷಣ<br>• ತರಗತಿ ಬೋಧನೆಯಲ್ಲಿ ಆಂಗಿಕ ಭಾಷೆಯ ಬಳಕೆ<br>• ಮಕ್ಕಳು ಹೇಗೆ ಕಲಿಯುತ್ತಾರೆ?<br>• ದೈಹಿಕ ಶಿಕ್ಷೆ ಮತ್ತು ಶಿಕ್ಷಣ<br>• ತರಗತಿಯಲ್ಲಿ ಕಥೆ ಹೇಳುವುದರ ಪ್ರಾಮುಖ್ಯತೆ<br>• ಶೈಕ್ಷಣಿಕ ಚಿಂತಕರ ಲೇಖನಗಳ ಚರ್ಚೆ. ಉದಾ: ಗಾಂಧೀಜಿ, ಟಾಗೋರ್, ಜಿಡ್ಡು ಕೃಷ್ಣಮೂರ್ತಿ |

‘ದರ್ಪಣ’* ನಿಯತಕಾಲಿಕೆಯಲ್ಲಿ ಪ್ರಕಟವಾದ ಶಿಕ್ಷಣಕ್ಕೆ ಸಂಬಂಧಿಸಿದ ಚಿಂತಕರ ಲೇಖನಗಳು ಚರ್ಚಿಸಲ್ಪಟ್ಟವು.

ಇಲ್ಲಿ ಬಹುಮುಖ್ಯವಾಗಿ, ಮಹಿಳಾ ಶಿಕ್ಷಕರ ವೇದಿಕೆಯ ಪ್ರಾರಂಭಿಕ ಹಂತದ ಚರ್ಚೆಗಳು ಶಿಕ್ಷಕಿಯರಿಗೆ ಸುಲಭವಾದ, ಆಸಕ್ತಿದಾಯಕವಾದ ಸಾಮಾನ್ಯ ವಿಷಯಗಳ ಸುತ್ತ ಹೆಣೆದುಕೊಂಡಿದ್ದರೆ, ನಂತರದ ಹಂತಗಳಲ್ಲಿ ಈ ಚರ್ಚೆ ನಿರ್ದಿಷ್ಟವಾದ ಶೈಕ್ಷಣಿಕ ವಿಷಯಗಳಾಗಿ ಬದಲಾವಣೆ ಹೊಂದಿದವು.

## ಮಹಿಳಾ ಶಿಕ್ಷಕರ ವೇದಿಕೆಯಲ್ಲಿ ಚರ್ಚಿತವಾದ ವಿಷಯಗಳು

ಬಹುತೇಕ ಚರ್ಚೆಗಳಲ್ಲಿ ಶಿಕ್ಷಕರು ಮತ್ತು ಫೌಂಡೇಷನ್ ಸದಸ್ಯರು ಜೊತೆಗೂಡಿ ಸುಗಮಗಾರಿಕೆ ನಡೆಸಿದರು. ಸಮಯ ಕಳೆದಂತೆ ಶಿಕ್ಷಕಿಯರೇ ಮುನ್ನೆಲೆಗೆ ಬಂದು ಸುಗಮಗಾರಿಕೆ ನಡೆಸುವಂತೆ ಫೌಂಡೇಷನ್ ಸದಸ್ಯರು ಪ್ರೋತ್ಸಾಹಿಸಿ ಅದಕ್ಕೆ ಬೇಕಾದ ಎಲ್ಲ ಅನುಕೂಲಗಳನ್ನು ಒದಗಿಸಿದರು. ಕೆಲವು ಸೂಕ್ಷ್ಮವಾದ ವಿಷಯಗಳ ಚರ್ಚೆ ಎದುರಾದಾಗ ಮತ್ತು ಶಿಕ್ಷಕರು ಅಂತಹ ವಿಷಯಗಳ ಬಗ್ಗೆ ಮಾತನಾಡಲು ಮುಜುಗರಪಟ್ಟರೆ, ಆಗ ಸಂಯೋಜಕರೇ ಚರ್ಚೆಯನ್ನು ಪ್ರಾರಂಭಿಸಿ, ಅಗತ್ಯವಿದ್ದಲ್ಲಿ ಚರ್ಚೆಗೆ ಬೇಕಾದ ಪ್ರಶ್ನೆಗಳನ್ನು ಕೇಳುವುದು ಮತ್ತು ವಿಷಯಕ್ಕೆ ಸಂಬಂಧಿಸಿದ ವಿವರಣೆಗಳನ್ನು ನೀಡುತ್ತ ಮೂಲ ಸುಗಮಕಾರರಿಗೆ ಸಹಾಯ ಒದಗಿಸುತ್ತಾರೆ. ಫೌಂಡೇಷನ್ ಸದಸ್ಯರು ಶಿಕ್ಷಕಿಯರಿಗೆ ಬೇಕಾದ ಎಲ್ಲ ರೀತಿಯ ಪ್ರೋತ್ಸಾಹವನ್ನು ಕೊಡುತ್ತ, ಅವರಲ್ಲಿ ನಂಬಿಕೆ ಮತ್ತು ಸಂಬಂಧವನ್ನು ಬೆಳೆಸುವ ವಾತಾವರಣವನ್ನು ಕಲಿಕಾ ಕೇಂದ್ರಗಳಲ್ಲಿ ಒದಗಿಸುತ್ತಾರೆ.

ವೇದಿಕೆಯ ಪ್ರಕ್ರಿಯೆಗಳೆಲ್ಲವೂ ಶಿಕ್ಷಕಿಯರು ಮತ್ತು ಸದಸ್ಯರು ಜೊತೆಯಾಗಿ ನಡೆಸುವಂತಿದ್ದು, ಶಿಕ್ಷಕಿಯರೇ ಸಂಪೂರ್ಣವಾಗಿ ಇದರ ಜವಾಬ್ದಾರಿಯನ್ನು ತೆಗೆದುಕೊಳ್ಳುವಂತೆ ಕೂಡ ಅವರನ್ನು ಪ್ರೋತ್ಸಾಹಿಸಲಾಗುತ್ತದೆ. ಸಾಮಾನ್ಯವಾಗಿ ಪ್ರತಿಯೊಂದು ವೇದಿಕೆಯಲ್ಲಿ ಚರ್ಚಿಸಲ್ಪಡುವ ವಿಷಯಗಳನ್ನು ಎಲ್ಲ ಶಿಕ್ಷಕರ ಒಮ್ಮತದ ಅಭಿಪ್ರಾಯದ ಮೇರೆಗೆ ಆಯ್ಕೆ ಮಾಡಲಾಗುತ್ತದೆ. ಒಬ್ಬ ಶಿಕ್ಷಕರು ವಿವರಿಸುವಂತೆ “ಸಾಧಾರಣವಾಗಿ, ಪ್ರತಿಯೊಂದು ವೇದಿಕೆಯ ಕೊನೆಯಲ್ಲಿ, ಎಲ್ಲ ಶಿಕ್ಷಕರು ಜೊತೆಯಾಗಿ ಮುಂದಿನ ವೇದಿಕೆಯಲ್ಲಿ ಚರ್ಚಿಸುವ ವಿಷಯವನ್ನು ಆಯ್ಕೆ ಮಾಡುತ್ತಾರೆ. ನಾವು ಈ ವಿಷಯವನ್ನು ಜೊತೆಯಾಗಿ ಒಂದು ಸಾಮಾನ್ಯ ಒಪ್ಪಿಗೆಯ

---

* ದರ್ಪಣ : ಇದು ಒಂದು ಶೈಕ್ಷಣಿಕ ನಿಯತಕಾಲಿಕೆ, ಮುಂಬೈನ ಎನ್‌ಆರ್‌ಟಿಟಿ ಸಹಯೋಗದೊಂದಿಗೆ ಕರ್ನಾಟಕ ಶಿಕ್ಷಣ ನೆಟ್‌ವರ್ಕ್ ಇದನ್ನು ಪ್ರಕಟಿಸುತ್ತದೆ. ಈ ನಿಯತಕಾಲಿಕೆಯನ್ನು ಪ್ರಮುಖವಾಗಿ ಡಿ.ಎಡ್. ಪ್ರಶಿಕ್ಷಣಾರ್ಥಿಗಳ ಶೈಕ್ಷಣಿಕ ಅಭಿವೃದ್ಧಿಗಾಗಿ ಪ್ರಕಟಪಡಿಸಲಾಗುತ್ತಿದ್ದು ಇದರಲ್ಲಿ ಮುಖ್ಯವಾಗಿ ಅರಬಿಂದೊ, ಗಾಂಧೀಜಿ, ಟ್ಯಾಗೋರ್, ಪೌಲೋ ಫ್ರಯರೆ ಮುಂತಾದ ಶೈಕ್ಷಣಿಕ ಚಿಂತಕರ ಲೇಖನಗಳು ಒಳಗೊಂಡಿರುತ್ತವೆ.

ಮೇರೆಗೆ ಆಯ್ಕೆ ಮಾಡುತ್ತೇವೆ. ವೇದಿಕೆಯ ಒಬ್ಬ ಶಿಕ್ಷಕಿ ವಿಷಯದ ಸುಗಮಗಾರಿಕೆಯ ಜವಾಬ್ದಾರಿಯನ್ನು ತೆಗೆದುಕೊಳ್ಳುತ್ತಾರೆ."

## ಮಹಿಳಾ ಶಿಕ್ಷಕರ ವೇದಿಕೆಯ ಪರಿಣಾಮಗಳು

ಕಳೆದ ಮೂರು ವರ್ಷಗಳಲ್ಲಿ ಶಿಕ್ಷಕಿಯರ ಬೆಳವಣಿಗೆಯಲ್ಲಿ ಮಹತ್ತರ ಬದಲಾವಣೆಯನ್ನು ಗುರುತಿಸಲಾಗಿದೆ. ಪ್ರತಿಯೊಂದು ಮಹಿಳಾ ಶಿಕ್ಷಕರ ವೇದಿಕೆಯಿಂದ 2–3 ಶಿಕ್ಷಕಿಯರು ಈಗ ವಿಷಯವಾರು ಸ್ವಯಂಪ್ರೇರಿತ ಶಿಕ್ಷಕರ ವೇದಿಕೆಗಳಲ್ಲಿ ಭಾಗವಹಿಸುತ್ತಿದ್ದಾರೆ. ಪ್ರತಿ ವಾರ ಸಂಜೆ 6ರಿಂದ 8ರವರೆಗೆ ನಡೆಯುವ ಚರ್ಚಾಕೂಟದಲ್ಲಿ ಭಾಗವಹಿಸುತ್ತಿದ್ದಾರೆ. ಈಗ ಅವರು ಶಿಕ್ಷಕ ಕಲಿಕಾ ಕೇಂದ್ರದ ಎಲ್ಲಾ ಚಟುವಟಿಕೆಗಳಲ್ಲಿ ಭಾಗವಹಿಸಲು ಉತ್ಸುಕರಾಗಿದ್ದು ಕೇಂದ್ರದ ಸಂಪನ್ಮೂಲಗಳನ್ನು ಬಳಸಿಕೊಳ್ಳಲು ಪ್ರಾರಂಭಿಸಿದ್ದಾರೆ. ಒಬ್ಬ ಸಂಯೋಜಕರು ತಿಳಿಸುವಂತೆ "ಸುರಪುರದ ವ್ಯಾಪ್ತಿಯಲ್ಲಿ ಬರುವ ಇಬ್ಬರು ಶಿಕ್ಷಕಿಯರು ಶಿಕ್ಷಕ ಕಲಿಕಾ ಕೇಂದ್ರದ ಯಾವುದೇ ಚಟುವಟಿಕೆಗಳಲ್ಲಿ ಇಲ್ಲಿಯವರೆಗೆ ಭಾಗವಹಿಸಿರಲಿಲ್ಲ. ಆದರೆ ಅವರನ್ನು ಮಹಿಳಾ ಶಿಕ್ಷಕರ ವೇದಿಕೆಗೆ ಪರಿಚಯಿಸಿದ ನಂತರ, ಅವರಲ್ಲಿ ಆತ್ಮವಿಶ್ವಾಸ ಹೆಚ್ಚಾಗಿದ್ದು, ಈಗ ವಿಜ್ಞಾನ ಮತ್ತು ಇಂಗ್ಲಿಷ್ ವಿಷಯದ ಸ್ವಯಂಪ್ರೇರಿತ ಶಿಕ್ಷಕರ ವೇದಿಕೆಗಳಲ್ಲಿ ನಿರಂತರವಾಗಿ ಭಾಗವಹಿಸುತ್ತಿದ್ದಾರೆ.

ಎಲ್ಲ ಬದಲಾವಣೆಗಳೂ ಮಹಿಳಾ ಶಿಕ್ಷಕರ ವೇದಿಕೆಯ ಚಟುವಟಿಕೆಗಳಿಂದಲೇ ಆಗಿರಬೇಕಿಲ್ಲ. ಆದರೆ ಮಹಿಳಾ ಶಿಕ್ಷಕರ ವೇದಿಕೆಯಲ್ಲಿ ಭಾಗವಹಿಸುವ ಎಲ್ಲ ಶಿಕ್ಷಕರಿಗೆ ಸಬಲರಾಗಿರುವ ಅನುಭವವಾಗಿದೆ. ಮನುಷ್ಯನ ಮೂಲ ಬಯಕೆಗಳಾದ ತನ್ನನ್ನು ಇತರರು ಗುರುತಿಸುವ, ತನ್ನ ಭಾವನೆಗಳನ್ನು ಗೌರವಿಸುವ ಅಂಶಗಳು ಈ ವೇದಿಕೆಯಿಂದ ಅವರಿಗೆ ಸಿಕ್ಕಿದೆ. ಚರ್ಚಿತವಾಗುವ ವಿಷಯಗಳು ಮತ್ತು ಅದರ ಮೌಲ್ಯಗಳನ್ನು ಬದಿಗಿಟ್ಟು, ಕೇವಲ ಮಹಿಳಾ ಶಿಕ್ಷಕರ ವೇದಿಕೆಯಲ್ಲಿ ಭಾಗವಹಿಸುವುದೇ ಒಂದು ಮುಕ್ತತೆಯ ಅನುಭವವನ್ನು ಕೊಡುತ್ತದೆ. ಒಬ್ಬ ಶಿಕ್ಷಕಿ ತಮ್ಮ ತೃಪ್ತಿಯ ಅನುಭವಗಳನ್ನು ಹೀಗೆ ವಿವರಿಸುತ್ತಾರೆ "ನಾನು ಮಹಿಳಾ ಶಿಕ್ಷಕರ ವೇದಿಕೆಯಲ್ಲಿ ಭಾಗವಹಿಸಲು ಮುಖ್ಯ ಕಾರಣ ಇಲ್ಲಿ ನಮ್ಮ ಭಾವನೆಗಳನ್ನು ವ್ಯಕ್ತಪಡಿಸಲು ಮತ್ತು ಒಟ್ಟಾರೆಯಾಗಿ ಸಂಭ್ರಮಿಸಲು ಒಂದು ಮುಕ್ತ ಅವಕಾಶವಿದೆ. ಇಂತಹ ಅವಕಾಶ ನಮಗೆ ಈ ಸಮಾಜದಲ್ಲಿ ಇಲ್ಲ. ಇದು ನಾವು ಮಹಿಳೆಯರು ಒಟ್ಟಾಗಿ ಸೇರಿ ಸಂಭ್ರಮಿಸುವ ವೇದಿಕೆ. ಇನ್ನೊಂದು ಮುಖ್ಯ ಕಾರಣವೆಂದರೆ ಇಲ್ಲಿ ನನಗೆ ಆಸಕ್ತಿ ಇರುವ ವಿಷಯಗಳಲ್ಲಿ ಸುಗಮಗಾರಿಕೆ ಮಾಡಲು ನನಗೆ ಜವಾಬ್ದಾರಿ ನೀಡುತ್ತಾರೆ, ಇದು ಈ ವೇದಿಕೆಯಲ್ಲಿ ನಾನು ನಿರಂತರವಾಗಿ ಭಾಗವಹಿಸಲು ನನ್ನನ್ನು ಪ್ರೇರೇಪಿಸುತ್ತದೆ." ಕೆಲವು ಶಿಕ್ಷಕಿಯರಿಗೆ ಮಾತನಾಡುವ ಮತ್ತು ಕೇಳುವ ಸ್ವಾತಂತ್ರ್ಯವನ್ನು ಅನುಭವಿಸುವುದು, ವೃತ್ತಿಪರರಂತೆ ನಮ್ಮನ್ನು ಎಲ್ಲರೂ ಕಾಣುವುದು ಇವೆಲ್ಲವೂ ಒಂದು ಹೊಸದಾದ, ಶಕ್ತಿಯುತವಾದ ಮತ್ತು ಭಾವನಾತ್ಮಕವಾದ

ಅನುಭವ. ಅನುಕೂಲಕರವಾದ, ಯಾವುದೇ ಗುಣ ಪರೀಕ್ಷೆಗೊಳಪಡಿಸದ, ತಮ್ಮ ಆಲೋಚನೆಗಳಿಗೆ ಧ್ವನಿಯಿರುವ ತಮ್ಮದೇ ಆದ ಸ್ಥಳವನ್ನು ಹೊಂದಿರುವುದು, ಹಲವು ಶಿಕ್ಷಕಿಯರಲ್ಲಿ ಉತ್ತಮ ವ್ಯಕ್ತಿತ್ವದ ಮತ್ತು ವೃತ್ತಿಪರತೆಯ ಪ್ರಜ್ಞೆಯನ್ನು ಹೆಚ್ಚಿಸಿದೆ.

ಮಹಿಳಾ ಶಿಕ್ಷಕರ ವೇದಿಕೆ ತನ್ನ ಆಕಾಂಕ್ಷೆಗಳನ್ನು ಅರ್ಥೈಸಿಕೊಳ್ಳಲು ಅವಕಾಶಗಳನ್ನು ಒದಗಿಸಿಕೊಟ್ಟಿದೆ ಎಂಬುದನ್ನು ಅವರು ಹೀಗೆ ವಿವರಿಸುತ್ತಾರೆ. "ನನಗೆ ಸಾಹಿತ್ಯದಲ್ಲಿ ಬಹಳ ಆಸಕ್ತಿ, ನಾನು ಲೇಖನಗಳನ್ನು ಬರೆಯುತ್ತೇನೆ ಮತ್ತು ಅವು ಪತ್ರಿಕೆಗಳಲ್ಲಿ ಪ್ರಕಟಗೊಳ್ಳುತ್ತವೆ. ಈ ಮಹಿಳಾ ಶಿಕ್ಷಕರ ವೇದಿಕೆಯು ನನ್ನ ಆಲೋಚನೆಗಳು ಮತ್ತು ಲೇಖನಗಳನ್ನು ಮಂಡಿಸಲು ಒಂದು ಉತ್ತಮ ವೇದಿಕೆಯಾಗಿದೆ. ಇಂತಹ ಹಲವಾರು ಅವಕಾಶಗಳನ್ನು ಶಿಕ್ಷಕ ಕಲಿಕಾ ಕೇಂದ್ರ ನನಗೆ ಒದಗಿಸಿದೆ. ಬಹುಶಃ ನಾನು ಕೇವಲ ಶಾಲೆಯಲ್ಲಿದ್ದುಕೊಂಡು ಇವುಗಳನ್ನು ಸಾಧಿಸಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಶಿಕ್ಷಕ ಕಲಿಕಾ ಕೇಂದ್ರದಿಂದ ಇದು ನನಗೆ ಸಾಧ್ಯವಾಗಿದೆ. ನಾನು ಮಕ್ಕಳ ಸಾಹಿತ್ಯ, ಕನ್ನಡ ಸಾಹಿತ್ಯ, ವಚನ ಸಾಹಿತ್ಯ, ಜಾನಪದ ಸಾಹಿತ್ಯ ಮುಂತಾದವುಗಳ ಮೇಲೆ ಹಲವಾರು ವೇದಿಕೆಗಳಲ್ಲಿ, ವಿಚಾರ ಸಂಕಿರಣಗಳಲ್ಲಿ ಮತ್ತು ಸಮ್ಮೇಳನಗಳಲ್ಲಿ ಲೇಖನಗಳನ್ನು ಮಂಡಿಸಿದ್ದೇನೆ. ಅಲ್ಲದೆ ಹಲವಾರು ಕನ್ನಡ ಸಾಹಿತ್ಯದ ಕಾರ್ಯಾಗಾರಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಕೆಲಸ ನಿರ್ವಹಿಸಿದ್ದೇನೆ. ಈ ಎಲ್ಲ ಅವಕಾಶಗಳನ್ನು ನನಗೆ ಫೌಂಡೇಷನ್ ಒದಗಿಸಿದೆ."

ವೇದಿಕೆಯಲ್ಲಿ ಚರ್ಚಿತವಾಗುವ ವಿಷಯಗಳೂ ಕೂಡ ಶಿಕ್ಷಕಿಯರ ಆತ್ಮಸ್ಥೈರ್ಯ ಮತ್ತು ಶಕ್ತಿಯನ್ನು ವೃದ್ಧಿಸುತ್ತದೆ. ಕೆಲವು ವಿಷಯಗಳು ನೇರವಾಗಿ ಮಹಿಳೆಯರ ಹಕ್ಕು ಮತ್ತು ಆಯ್ಕೆಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಒದಗಿಸಿ ಅವರನ್ನು ಶಿಕ್ಷಿತರನ್ನಾಗಿ ಮಾಡುತ್ತದೆ. ಇನ್ನು ಕೆಲವು ಶಿಕ್ಷಣಕ್ಕೆ ಸಂಬಂಧಿಸಿದ ವಿಷಯಗಳು ನೇರವಾಗಿ ಅವರ ತರಗತಿ ಪ್ರಕ್ರಿಯೆಯಲ್ಲಿ ಬದಲಾವಣೆಯನ್ನು ತರಲು ನೆರವಾಗಿವೆ. ಶಿಕ್ಷಣದ ಮೂಲಭೂತ ಪರಿಕಲ್ಪನೆಗಳಾದ 'ಶಿಕ್ಷಣದ ಸುತ್ತಮುತ್ತ ಇರುವ ಭಯದ ವಾತಾವರಣ', 'ಮಕ್ಕಳ ಕಲಿಕೆಯ ಮೇಲೆ ದೈಹಿಕ ಶಿಕ್ಷೆಯ ಪರಿಣಾಮ', 'ಶಿಕ್ಷಕ ಮತ್ತು ಬೋಧನೆ' ಮುಂತಾದ ವಿಷಯಗಳು ಶಿಕ್ಷಕರಿಗೆ ಆಳವಾದ ಜ್ಞಾನವನ್ನು ಒದಗಿಸಿವೆ ಹಾಗೂ ತಮ್ಮ ಬೋಧನಾ ವಿಧಾನವನ್ನು ಇನ್ನೂ ಉತ್ತಮಗೊಳಿಸಿಕೊಳ್ಳುವಲ್ಲಿ ಮಾರ್ಗದರ್ಶನ ನೀಡಿವೆ. ಒಬ್ಬ ಶಿಕ್ಷಕಿ 'ಮೂಢನಂಬಿಕೆ'ಗಳ ಮೇಲಿನ ಚರ್ಚೆಯು ಹೇಗೆ ಅವರ ಜೀವನದಲ್ಲಿ ಬದಲಾವಣೆಯನ್ನು ತಂದಿದೆಯೆಂದು ಹೀಗೆ ವಿವರಿಸುತ್ತಾರೆ: "ಮಹಿಳಾ ಶಿಕ್ಷಕರ ವೇದಿಕೆಯಲ್ಲಿ ನಾವು 'ಸಮಾಜದಲ್ಲಿನ ಮೂಢ ನಂಬಿಕೆಗಳು' ವಿಷಯದ ಮೇಲೆ ಚರ್ಚೆ ಕೈಗೊಂಡಿದ್ದೆವು. ಒಬ್ಬ ವಿಜ್ಞಾನ ಶಿಕ್ಷಕಿಯಾಗಿ ನಾನೂ ಕೂಡ ಹಲವಾರು ಮೂಢನಂಬಿಕೆಗಳನ್ನು ಆಚರಿಸುತ್ತಿದ್ದೆ. ಆದರೆ ಚರ್ಚೆಯು ಈ ನಂಬಿಕೆಗಳಿಂದ ನನ್ನನ್ನು ಹೊರಬರುವಂತೆ ಮಾಡಿತು. ಈಗ ನಾನು ನನ್ನ ತರಗತಿಗಳಲ್ಲಿ ನಿರಂತರವಾಗಿ ವಿಜ್ಞಾನ ಪ್ರಯೋಗಗಳನ್ನು ನಡೆಸುತ್ತೇನೆ ಮತ್ತು ಮಕ್ಕಳಿಗೆ ವೈಜ್ಞಾನಿಕ ಮನೋಭಾವನೆಯನ್ನು ಬೆಳೆಸಲು ಶಿಕ್ಷಕ ಕಲಿಕಾ ಕೇಂದ್ರದ ಸಂಪನ್ಮೂಲಗಳನ್ನು ವಿಪುಲವಾಗಿ ಬಳಸಿಕೊಳ್ಳುತ್ತಿದ್ದೇನೆ."

ಮಹಿಳಾ ಶಿಕ್ಷಕರ ವೇದಿಕೆ ಪರಸ್ಪರ ಅನುಭವಗಳನ್ನು ಹಂಚಿಕೊಳ್ಳಲು, ವೃತ್ತಿಪರರಂತೆ

ಒಟ್ಟಾಗಿ ಚರ್ಚಿಸಲು ಮತ್ತು ಕಲಿಯಲು ಅವಕಾಶವನ್ನು ಒದಗಿಸುತ್ತದೆ. ಒಬ್ಬ ಶಿಕ್ಷಕಿಯು ಈ ವೇದಿಕೆಯಲ್ಲಿ ತನ್ನ ಸಹೋದ್ಯೋಗಿಯಿಂದ ಹೇಗೆ ನೇರವಾಗಿ ಒಂದು ನವೀನ ಬೋಧನಾ ವಿಧಾನವನ್ನು ಕಲಿತೆ ಎಂಬುದನ್ನು ಹೀಗೆ ತಿಳಿಸುತ್ತಾರೆ: "ನಾವು ಈ ವೇದಿಕೆಯಲ್ಲಿ ಬೇರೆ ಶಾಲೆಯ ಶಿಕ್ಷಕರನ್ನು ಭೇಟಿಯಾಗುತ್ತೇವೆ ಹಾಗೂ ಶಾಲೆಗೆ ಸಂಬಂಧಿಸಿದ ಮತ್ತು ವೈಯಕ್ತಿಕ ವಿಷಯಗಳನ್ನು ಕುರಿತು ಚರ್ಚಿಸುತ್ತೇವೆ. ಒಮ್ಮೆ ನಾನು ಮಕ್ಕಳಲ್ಲಿ ಬರವಣಿಗೆಯ ಸಾಮರ್ಥ್ಯವನ್ನು ಹೆಚ್ಚಿಸುವಲ್ಲಿ ಎದುರಿಸುತ್ತಿರುವ ಸಮಸ್ಯೆಯನ್ನು ಕುರಿತು ವೇದಿಕೆಯಲ್ಲಿ ಹೇಳಿಕೊಂಡೆ. ಆಗ ಗುಂಪಿನಲ್ಲಿದ್ದ ಇನ್ನೊಬ್ಬ ಶಿಕ್ಷಕಿ ಈ ಸಮಸ್ಯೆಯನ್ನು ಕುರಿತಂತೆ ತಮ್ಮ ತರಗತಿಯಲ್ಲಿ ಕೈಗೊಂಡ ಬೋಧನಾ ವಿಧಾನವನ್ನು ವಿವರಿಸುತ್ತ ಹೇಗೆ ಈ ಸಮಸ್ಯೆಗೆ ಪರಿಹಾರ ಕಂಡುಕೊಂಡರು ಎಂಬುದನ್ನು ವಿವರಿಸಿದರು. ಆಗ ನನಗೂ ಕೂಡ ಇಂತಹ ಸಮಸ್ಯೆಯನ್ನು ಪರಿಹರಿಸುವ ಹಲವಾರು ಉಪಾಯಗಳು ದೊರೆತವು. ಹೀಗೆ ಇಂತಹ ಹಲವಾರು ಚರ್ಚೆಗಳು ನಮ್ಮ ದೈನಂದಿನ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಸಹಾಯಕವಾಗುತ್ತವೆ. ನನಗೆ ಕಲೆಯಲ್ಲಿ ಹೆಚ್ಚಿನ ಆಸಕ್ತಿ ಇರಲಿಲ್ಲ, ಆದರೆ ಮಹಿಳಾ ಶಿಕ್ಷಕರ ವೇದಿಕೆಯಲ್ಲಿ ಕಲೆಯನ್ನು ಕುರಿತ ತರಬೇತಿಯಲ್ಲಿ ಪಾಲ್ಗೊಂಡ ನಂತರ ಇದು ಬಹಳ ಸುಲಭ ಎನಿಸಿತು ಮತ್ತು ನಾನು ನನ್ನ ಶಾಲೆಯ ಮಕ್ಕಳಿಗೆ ಈಗ ಅದನ್ನು ಹೇಳಿಕೊಡುತ್ತಿದ್ದೇನೆ."

ಮಹಿಳಾ ಶಿಕ್ಷಕರ ವೇದಿಕೆಯ ಚಟುವಟಿಕೆಯಲ್ಲಿ ಭಾಗವಹಿಸುವುದರ ಜೊತೆಯಲ್ಲಿ ಶಿಕ್ಷಕಿಯರು ದೊಡ್ಡ ದೊಡ್ಡ ಕಾರ್ಯಕ್ರಮಗಳನ್ನು ಆಯೋಜಿಸುವ ಮತ್ತು ಸುಗಮಗಾರಿಕೆ ಮಾಡುವ ಜವಾಬ್ದಾರಿಗಳನ್ನೂ ತೆಗೆದುಕೊಳ್ಳುತ್ತಿದ್ದಾರೆ. ಸ್ವಯಂಪ್ರೇರಿತರಾಗಿ ಆಡಳಿತಾತ್ಮಕ ವಿಷಯಗಳನ್ನು, ಚಟುವಟಿಕೆಗಳನ್ನು ನಿರ್ವಹಿಸಬಲ್ಲೆ ಎಂಬುದನ್ನು ಸಾಬೀತುಪಡಿಸುತ್ತಿದ್ದಾರೆ. ಒಂದು ದೊಡ್ಡ ಕಾರ್ಯಕ್ರಮವನ್ನು ಆಯೋಜಿಸಿದ ಒಬ್ಬ ಶಿಕ್ಷಕಿ ತಮ್ಮ ಅನುಭವವನ್ನು ಹೀಗೆ ಹಂಚಿಕೊಳ್ಳುತ್ತಾರೆ: "ನಾವು ಇತ್ತೀಚೆಗೆ ಮಹಿಳಾ ದಿನಾಚರಣೆಯನ್ನು ಆಚರಿಸಿದೆವು, ವೇದಿಕೆಯ ಎಲ್ಲ ಸದಸ್ಯರೂ ಕಾರ್ಯಕ್ರಮದ ಆಯೋಜನೆಯಿಂದ ಹಿಡಿದು ಅನುಷ್ಠಾನದವರೆಗೆ ಒಂದೊಂದು ಜವಾಬ್ದಾರಿಯನ್ನು ವಹಿಸಿಕೊಂಡಿದ್ದೆವು. ನಾವು ಇದನ್ನು ನಮ್ಮ ಕಾರ್ಯಕ್ರಮವೆಂದು ಭಾವಿಸಿದೆವು ಮತ್ತು ನಮ್ಮ ಕೈಲಾದ ಶಕ್ತಿ ಸಾಮರ್ಥ್ಯವನ್ನು ಬಳಸಿದೆವು. ಇಡೀ ವೇದಿಕೆಯು ಶಿಕ್ಷಕಿಯರಿಂದ ತುಂಬಿತ್ತು. ನಾವು ಕಾರ್ಯಕ್ರಮ ನಿರೂಪಣೆ, ಅತಿಥಿಗಳ ಆಹ್ವಾನ ಮತ್ತು ಅವರ ಯೋಗಕ್ಷೇಮ ನೋಡಿಕೊಳ್ಳುವುದು, ಭಾಷಣ ಹೀಗೆ ಎಲ್ಲ ತರಹದ ಜವಾಬ್ದಾರಿಯನ್ನೂ ನಿರ್ವಹಿಸಿದೆವು. ನಾನು ಈ ಕಾರ್ಯಕ್ರಮವನ್ನು ಎಂದಿಗೂ ಮರೆಯುವುದಿಲ್ಲ. ಯಾಕೆಂದರೆ ನಾವು ನಮ್ಮ ಜವಾಬ್ದಾರಿಯನ್ನು ಒಂದು ಆತ್ಮಸ್ಥೈರ್ಯದಿಂದ ನಿರ್ವಹಿಸಿದೆವು ಮತ್ತು ನಾವೂ ಕೂಡ ಇಂತಹ ಕಾರ್ಯಕ್ರಮಗಳನ್ನು ಮಾಡಬಲ್ಲೆವು ಎಂಬುದನ್ನು ಸಾಧಿಸಿ ತೋರಿಸಿದೆವು." ಇಂತಹ ಹಲವು ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಿರ್ವಹಿಸಿದ ತೃಪ್ತಿಯು ಅವರಲ್ಲಿ ಈ ಮಹಿಳಾ ಶಿಕ್ಷಕರ ವೇದಿಕೆಯಲ್ಲಿ ಭಾಗವಹಿಸುವುದರ ಮೂಲಕ ಲಭಿಸಿದೆ.

## ಮಹಿಳಾ ಶಿಕ್ಷಕರ ವೇದಿಕೆಯ ಸವಾಲುಗಳು

ಮಹಿಳಾ ಶಿಕ್ಷಕರ ವೇದಿಕೆಯೊಂದಿಗಿನ ಫೌಂಡೇಷನ್‌ನ ಅನುಭವವು ಪ್ರೋತ್ಸಾಹದಾಯಕವಾಗಿದೆ. ಶಿಕ್ಷಕಿಯರು ತಮ್ಮ ಎಲ್ಲ ಅಡೆತಡೆಗಳು ಮತ್ತು ಹಿಂಜರಿಕೆಗಳ ನಡುವೆಯೂ ವೇದಿಕೆಯ ಚಟುವಟಿಕೆಗಳಲ್ಲಿ ಭಾಗವಹಿಸುವ ಪ್ರಯತ್ನ ಮಾಡುತ್ತಿದ್ದಾರೆ. ಒಬ್ಬ ಶಿಕ್ಷಕಿ ಹೀಗೆ ಹೇಳುತ್ತಾರೆ: "ನನಗೆ ಇಬ್ಬರು ಮಕ್ಕಳಿದ್ದಾರೆ, ಅವರಿಬ್ಬರೂ ಖಾಸಗಿ ಶಾಲೆಯಲ್ಲಿ ಓದುತ್ತಿದ್ದಾರೆ. ಒಂದು ವೇಳೆ ನನಗೆ ಶನಿವಾರ ಮಧ್ಯಾಹ್ನದ ಚಟುವಟಿಕೆಯಲ್ಲಿ ಭಾಗವಹಿಸುವ ಸಂದರ್ಭವಿದ್ದರೆ, ಒಂದು ಕಾಗದದಲ್ಲಿ 'ನಾನು ಶಿಕ್ಷಕ ಕಲಿಕಾ ಕೇಂದ್ರಕ್ಕೆ ಹೋಗುತ್ತಿದ್ದೇನೆ' ಎಂದು ಬರೆದು ಮನೆಯ ಬಾಗಿಲಿನ ಮೇಲೆ ಅಂಟಿಸಿ ಬರುತ್ತೇನೆ. ನನ್ನ ಮಕ್ಕಳು ಶಾಲೆಯಿಂದ ಬಂದ ಮೇಲೆ, ಕಾಗದವನ್ನು ಓದಿ ನೇರವಾಗಿ ಆ ಕೇಂದ್ರಕ್ಕೇ ಬರುತ್ತಾರೆ. ನಾವು ಚರ್ಚೆಯನ್ನು ಮುಗಿಸುವವರೆಗೆ ಅವರು ಕೇಂದ್ರದ ಆವರಣದಲ್ಲಿ ಇತರ ಮಕ್ಕಳೊಂದಿಗೆ ಆಟವಾಡುತ್ತಾರೆ. ಹೀಗೆ ನಾನು ವೇದಿಕೆಯ ಸಭೆಗಳಿಗೆ ಹಾಜರಾಗಲು ಪ್ರಯತ್ನಿಸುತ್ತೇನೆ."

ಶಾಲೆ ಮತ್ತು ಶಿಕ್ಷಕ ಕಲಿಕಾ ಕೇಂದ್ರದ ನಡುವಿನ ದೂರವೂ ಕೂಡ ವೇದಿಕೆಯ ಚಟುವಟಿಕೆಗಳಲ್ಲಿ ನಿರಂತರ ಭಾಗವಹಿಸುವಿಕೆಗೆ ಒಂದು ಸವಾಲಾಗಿದೆ. ಒಬ್ಬ ಶಿಕ್ಷಕಿ ಹೇಳುವಂತೆ "ನಾನು ನಿರಂತರವಾಗಿ ಶಿಕ್ಷಕ ಕಲಿಕಾ ಕೇಂದ್ರದ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದೇನೆ. ನನ್ನ ಮುಖ್ಯ ಸವಾಲೆಂದರೆ ಸಾರಿಗೆ ವ್ಯವಸ್ಥೆ. ನಾನು ನಾರಾಯಣಪುರದಿಂದ 10 ಕಿ.ಮೀ. ದೂರದಲ್ಲಿರುವ ಮಾರನಾಳ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದೇನೆ. ಅಲ್ಲಿ ಸಾರಿಗೆ ವ್ಯವಸ್ಥೆ ಅಷ್ಟು ಪೂರಕವಾಗಿಲ್ಲ. ಹಾಗಾಗಿ ನಾವು ಶಿಕ್ಷಕರೆಲ್ಲ ಸೇರಿ ಒಂದು ಬಾಡಿಗೆ ಆಟೊ ಮಾಡಿಕೊಂಡಿದ್ದೇವೆ. ಆದರೆ ಅವನ ವಿವಿಧ ಜವಾಬ್ದಾರಿಗಳಿಂದಾಗಿ ಯಾವಾಗಲೂ ತಡವಾಗಿಯೇ ಬರುತ್ತಾನೆ. ದಿನನಿತ್ಯದ ತರಗತಿ ಜವಾಬ್ದಾರಿಯಿಂದ ವ್ಯಸ್ತರಾದ ನಮಗೆ ಸಾಕಷ್ಟು ಆಸಕ್ತಿ ಕುಂಠಿತವಾಗುತ್ತದೆ. ಹಾಗಾಗಿ ವೇದಿಕೆಯ ಚಟುವಟಿಕೆಯಲ್ಲಿ ಭಾಗವಹಿಸುವುದು ಕೆಲವೊಮ್ಮೆ ಸಾಧ್ಯವಾಗುವುದಿಲ್ಲ."

ಇವೆಲ್ಲ ಸಮಸ್ಯೆಗಳ ನಡುವೆ, ವೇದಿಕೆಯ ಕೆಲವು ಪ್ರಕ್ರಿಯೆಗಳು ಕೂಡ ಒಂದು ಸವಾಲಾಗಿ ಮುಂದುವರಿಯುತ್ತವೆ. ಚಟುವಟಿಕೆಗಳಿಗೆ ನಿಗದಿತ ಸಮಯವನ್ನು ನಿರ್ಧರಿಸುವುದು ಒಂದು ಸವಾಲು. ಶಿಕ್ಷಕರ ದೈನಂದಿನ ಜವಾಬ್ದಾರಿಗಳ ಕಾರಣ ಸಂಜೆಯ ಅವಧಿಯಲ್ಲಿ ಸಭೆ ನಡೆಸುವುದು ಕಷ್ಟ. ದೂರದ ಗ್ರಾಮದಲ್ಲಿ ಕೆಲಸ ನಿರ್ವಹಿಸುವ ಕೆಲವು ಶಿಕ್ಷಕಿಯರು ವಾರದ ಕೊನೆಯಲ್ಲಿ ತಮ್ಮ ತಮ್ಮ ಮನೆಗಳಿಗೆ ಹೋಗಲು ಬಯಸುತ್ತಾರೆ. ಹಾಗಾಗಿ ಆಸಕ್ತಿಯಿದ್ದರೂ ಅವರಿಗೆ ವೇದಿಕೆಯ ಚಟುವಟಿಕೆಗಳಲ್ಲಿ ಭಾಗವಹಿಸಲು ಸಾಧ್ಯವಾಗುವುದಿಲ್ಲ. ಇದರಿಂದಾಗಿ ವೇದಿಕೆಯ ನಿತ್ಯ ಸದಸ್ಯರ ಸಂಖ್ಯೆಯಲ್ಲಿ ಮತ್ತು ನಿರಂತರತೆಯಲ್ಲಿ ವ್ಯತ್ಯಾಸವುಂಟಾಗುತ್ತದೆ.

ಶಿಕ್ಷಕ ಕಲಿಕಾ ಕೇಂದ್ರದ ಮಹಿಳಾ ಸಂಯೋಜಕರ ಅಲಭ್ಯತೆಯೂ ಕೂಡ ಶಿಕ್ಷಕಿಯರ ಭಾಗವಹಿಸುವಿಕೆಯ ಮೇಲೆ ಪರಿಣಾಮ ಬೀರುತ್ತದೆ. ಫೌಂಡೇಷನ್ ಸದಸ್ಯರು ಅಭಿಪ್ರಾಯಪಡುವಂತೆ ಕೆಲವು ಪ್ರಕಾರದ ಚರ್ಚೆಗಳಲ್ಲಿ ಮಹಿಳಾ

ಸಂಯೋಜಕರ ಲಭ್ಯತೆ ಅತಿ ಅವಶ್ಯಕವಾಗುತ್ತದೆ. ಕೆಲವು ಶಿಕ್ಷಕರು ಧೈರ್ಯವಾಗಿ ಎಲ್ಲರೊಂದಿಗೂ ಅಭಿಪ್ರಾಯ ವ್ಯಕ್ತಪಡಿಸುವುದನ್ನು ಒಪ್ಪಿಕೊಂಡರೂ ಕೆಲವು ಮಹಿಳಾ ಶಿಕ್ಷಕರು ಅಭಿಪ್ರಾಯಗಳನ್ನು ಹಂಚಿಕೊಳ್ಳಲು ಹಿಂಜರಿಯುತ್ತಾರೆ ಎಂಬುದನ್ನೂ ಸದಸ್ಯರು ಗಮನಿಸಿದ್ದಾರೆ. ಇಂತಹ ಸಂದರ್ಭಗಳಲ್ಲಿ ಮಹಿಳಾ ಸಂಯೋಜಕರು ಅವರ ಪರವಾಗಿ ನಿಂತು ಅವರಿಗೆ ಪ್ರೋತ್ಸಾಹ ಮತ್ತು ಸಹಾಯ ಒದಗಿಸುವುದನ್ನು ಶಿಕ್ಷಕರು ನಿರೀಕ್ಷಿಸುತ್ತಾರೆ.

ಎಲ್ಲ ಶಿಕ್ಷಕಿಯರೂ ಆಸಕ್ತಿಯಿಂದ ಭಾಗವಹಿಸುವಂತೆ ಮಾಡುವ ವಿಷಯಗಳ ಆಯ್ಕೆಯೂ ಕೂಡ ಒಂದು ಸವಾಲು. ಶಿಕ್ಷಕರು ವಿವಿಧ ವಿಷಯಗಳ ಹಿನ್ನೆಲೆಯಿಂದ ಮತ್ತು ಆಸಕ್ತಿಯಿಂದ ಬಂದಿರುತ್ತಾರೆ. ಒಂದು ವೇಳೆ ವೇದಿಕೆಯ ಚರ್ಚೆಗಳು ಅವರ ಆಸಕ್ತಿಗೆ ಅನುಗುಣವಾಗಿರದಿದ್ದರೆ ಅದು ಅವರ ಭಾಗವಹಿಸುವಿಕೆ ಮತ್ತು ನಿರಂತರತೆಯ ಮೇಲೆ ಪರಿಣಾಮ ಬೀರುತ್ತದೆ. ಕೆಂಭಾವಿ ಶಿಕ್ಷಕ ಕಲಿಕಾ ಕೇಂದ್ರದಲ್ಲಿ ಕೆಲವು ಶಿಕ್ಷಕರು ಗಣಕಯಂತ್ರದ ಬಳಕೆಯಲ್ಲಿ ತರಬೇತಿಯನ್ನು ಆಯೋಜಿಸುವಂತೆ ಕೇಳಿಕೊಂಡಿದ್ದರು. ಆದರೆ ಹಲವು ಕಾರಣಗಳಿಂದಾಗಿ ಆ ಸಮಯದಲ್ಲಿ ಅವರ ಕೋರಿಕೆಯನ್ನು ಈಡೇರಿಸಲು ಫೌಂಡೇಷನ್ ಸದಸ್ಯರಿಗೆ ಸಾಧ್ಯವಾಗಲಿಲ್ಲ. ಹೀಗಾಗಿ ನಂತರದ ಚರ್ಚೆಗಳಲ್ಲಿ ಅವರ ಭಾಗವಹಿಸುವಿಕೆ ಕಡಿಮೆ ಆಗಿರುವುದು ಕಂಡುಬಂದಿತ್ತು. ಇದನ್ನು ಅರ್ಥಮಾಡಿಕೊಂಡು ಕೆಲವು ದಿನಗಳ ನಂತರ ಗಣಕಯಂತ್ರದ ಬಳಕೆಯ ಮೇಲೆ ತರಬೇತಿಯನ್ನು ಆಯೋಜಿಸಿದರು. ಆಗ ಸದಸ್ಯರ ಸಂಖ್ಯೆಯೂ ನಿಧಾನವಾಗಿ ಹೆಚ್ಚಾಗಿರುವುದು ಕಂಡುಬಂದಿತು.

## ಉಪಸಂಹಾರ

ಏನೇ ಸವಾಲುಗಳಿದ್ದರೂ, ಫೌಂಡೇಷನ್‌ನ 'ಶಿಕ್ಷಕರ ವೃತ್ತಿಪರ ಅಭಿವೃದ್ಧಿ' ಕಾರ್ಯಕ್ರಮಗಳಲ್ಲಿ ಶಿಕ್ಷಕಿಯರು ಭಾಗವಹಿಸುವಂತೆ ಮಾಡುವಲ್ಲಿ ಮಹಿಳಾ ಶಿಕ್ಷಕರ ವೇದಿಕೆಯು ಒಂದು ಪ್ರಮುಖ ಸಾಧನವಾಗಿದೆ. ಈ ಅನುಭವ ಫೌಂಡೇಷನ್ ಸದಸ್ಯರಿಗೆ ಹೇಗೆ ಶಿಕ್ಷಕಿಯರನ್ನೂ ವೃತ್ತಿಪರ ಅಭಿವೃದ್ಧಿ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಬಹುದು ಮತ್ತು ಅವರ ಬಯಕೆಗಳನ್ನು ಈಡೇರಿಸಬಹುದು ಎಂಬುದರ ಪಾಠವನ್ನು ಕಲಿಸಿದೆ. ಇಂತಹ ಸಂದರ್ಭಗಳಲ್ಲಿ ಶಿಕ್ಷಕರ ಪ್ರಸ್ತುತ ಸನ್ನಿವೇಶ, ಸಂದರ್ಭ ಮತ್ತು ಸವಾಲುಗಳನ್ನು ಹೇಗೆ ಅರ್ಥೈಸಿಕೊಳ್ಳಬೇಕು, ಆ ಮೂಲಕ ಅವರಲ್ಲಿ ಬದಲಾವಣೆಯನ್ನು ತರಲು ಯಾವ ಯಾವ ಅನುಕೂಲಕರ ಯೋಜನೆಗಳನ್ನು ರೂಪಿಸಬೇಕು ಎಂಬುದರ ಅನುಭವವನ್ನು ಈ ವೇದಿಕೆ ತಿಳಿಸಿದೆ. ವೃತ್ತಿಪರ ಅಭಿವೃದ್ಧಿ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ಮುಂಚಿತವಾಗಿ ಶಿಕ್ಷಕಿಯರಲ್ಲಿ ಆತ್ಮವಿಶ್ವಾಸ ಮತ್ತು ಸಬಲೀಕರಣದ ಭಾವನೆಯನ್ನು ತುಂಬಬೇಕು. ಅವರ ಅಸ್ಮಿತೆಯನ್ನು ಗುರುತಿಸಿಕೊಳ್ಳುವ ಅವಕಾಶಗಳನ್ನು ಸೃಷ್ಟಿಸಬೇಕು ಎಂಬುದು ಸದಸ್ಯರಿಗಾದ ಬಹುದೊಡ್ಡ ಕಲಿಕೆ. ಶಿಕ್ಷಕಿಯರಲ್ಲಿ ಶಕ್ತಿಯನ್ನು ತುಂಬುತ್ತ, ಒಂದು ಅನುಕೂಲಕರವಾದ ಸನ್ನಿವೇಶದಲ್ಲಿ ಅವರನ್ನು ವೃತ್ತಿಪರ ಅಭಿವೃದ್ಧಿಯತ್ತ ಕೊಂಡೊಯ್ಯುವಲ್ಲಿ ಈ ವೇದಿಕೆ ಸಫಲವಾಗಿದೆ.

ಭಯರಹಿತ ವಾತಾವರಣವು ಒಂದು ಭಾವನಾತ್ಮಕ ಮತ್ತು ಅನುಕೂಲಕರವಾದ ಭಾಗವಹಿಸುವಿಕೆಗೆ ದಾರಿ ಮಾಡಿಕೊಡುತ್ತದೆ. ಶಿಕ್ಷಕಿಯರನ್ನು ಗುರುತಿಸುವುದು, ಅವರ ಅಭಿಪ್ರಾಯಗಳಿಗೆ ಪ್ರೋತ್ಸಾಹ ನೀಡುವುದು, ಅವರಲ್ಲಿ ಆತ್ಮವಿಶ್ವಾಸ ಮತ್ತು ಗೌರವವನ್ನು ಹೆಚ್ಚಿಸುತ್ತದೆ. ಇದು ಮುಂದಿನ ನೇರ ಶೈಕ್ಷಣಿಕವಾದ ವೃತ್ತಿಪರ ಚಟುವಟಿಕೆಗಳಲ್ಲಿ ಗುಣಾತ್ಮಕವಾಗಿ ತೊಡಗಿಸಿಕೊಳ್ಳಲು ಮಹಿಳಾ ಶಿಕ್ಷಕರಿಗೆ ಅನುವುಮಾಡಿಕೊಡುತ್ತದೆ.

**ಗುರು ಮೊಗೇರ್** : ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಹೊಂದಿರುವ ಇವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ 'ಕ್ಷೇತ್ರ ಸಂಶೋಧನಾ ತಂಡ'ದ ಸಂಯೋಜಕರಾಗಿದ್ದು, ಪ್ರಸ್ತುತ ಕರ್ನಾಟಕದ ಹತ್ತು ಜಿಲ್ಲೆಗಳಲ್ಲಿ, ಶಿಕ್ಷಣ ಕ್ಷೇತ್ರದಲ್ಲಿನ ವಿವಿಧ ಸಂಶೋಧನಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಸರಳ ಸಂಶೋಧನೆಯ ವಿಧಾನದ ಕುರಿತ ಶಿಕ್ಷಕರಿಗೆ ಕಾರ್ಯಾಗಾರಗಳನ್ನು ಹಮ್ಮಿಕೊಳ್ಳುತ್ತಾರೆ. ಸದ್ಯ ಕಲಬುರಗಿಯಲ್ಲಿ ವಾಸವಾಗಿದ್ದಾರೆ.

*ಸಂಪರ್ಕ:* guru.moger@azimpremjifoundation.org